ಉಪನ್ಯಾಸ: ಗ್ರಂಥಮಾಲೆ

೩೪

# ಕನ್ನಡಕ್ಕೆ
# ಶ್ರೀ ಪುರಂದರದಾಸರು
# ನೀಡಿದ ಕೊಡುಗೆ

ಪ್ರೊ. ಜಿ. ಡಿ. ನಾಡಕರ್ಣಿ, ಎಂ.ಎ.




ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಅಕ್ಟೋಬರ್, ೧೯೬೮

# ಉಪನ್ಯಾಸ ಗ್ರಂಥಮಾಲೆ

೧. ಭವಭೂತಿ (ದ್ವಿತೀಯ ಆವೃತ್ತಿ) –ಕೆ. ಕೃಷ್ಣಮೂರ್ತಿ
೨. ಮನೋರೋಗಗಳು (ತೃ.ಆ. ) –ಎಸ್. ಆರ್. ಕುಲಕರ್ಣಿ
೩. ಪ್ರಥಮ ಪಂಚವಾರ್ಷಿಕ ಯೋಜನೆ
ಹಾಗೂ ಒಕ್ಕಲುತನ –ಎಸ್. ಪಿ. ಪಾಟೀಲ
೪. ಗಾದೆಗಳು (ತೃತೀಯ ಆವೃತ್ತಿ) –ಎ. ಕೆ. ರಾಮಾನುಜನ್
೫. ಭಾರತದಲ್ಲಿ ಜಾತಿ ಪದ್ಧತಿ (ದ್ವಿ.ಆ.)–ವ್ಹಿ. ಎಸ್. ಡಿ'ಸೋಜಾ
೬. ಕೀಟಕ ಪಿಡುಗುಗಳ ಸಮೀಕ್ಷಣೆ (ದ್ವಿ.ಆ.)
–ಎಸ್. ಎಸ್. ಕಟಗಿಹಳ್ಳಿಮಠ
೭. ರಾಜಕೀಯ ಪಕ್ಷಗಳು(ದ್ವಿ. ಆ.)-ಎನ್. ರಾಜಗೋಪಾಲರಾವ್
೮. ಸ್ವಾದಿ ಅರಸುಮನೆತನ ( ,, )–ಎಸ್. ಎಸ್. ಮಾಳವಾಡ
೯. ಮಕ್ಕಳ ಶಿಕ್ಷಣ (ತೃ.ಆ.) –ಡಿ. ಎಸ್. ಕರ್ಕಿ
೧೦. ಮೂಢ ನಂಬಿಕೆಗಳು ( ,, ) –ಎಲ್. ಆರ್. ಹೆಗಡೆ
೧೧. ಸಂಸ್ಕೃತ ಕವಯಿತ್ರಿಯರು (ದ್ವಿ. ಆ.)–ಕೆ. ಟಿ. ಪಾಂಡುರಂಗಿ
೧೨. ನಿತ್ಯಜೀವನದಲ್ಲಿ ರಸಾಯನಶಾಸ್ತ್ರ (,,) –ಬಿ. ವಿರೂಪಾಕ್ಷಪ್ಪ
೧೩. ಸಾರ್ವಜನಿಕ ಆಡಳಿತ (ದ್ವಿ. ಆ.) –ಜಿ. ಎಸ್. ಹಾಲಪ್ಪ
೧೪. ವಿಚಾರವಾದ ( ,, ) –ಗೌರೀಶ ಕೈಕಿಣಿ
೧೫. ಮಹಾಕವಿ ಮಿಲ್ಟನ್ ( ,, ) –ಜಿ. ಎಸ್. ಆಮೂರ
೧೬. ಭಾರತದಲ್ಲಿ ಗ್ರಂಥಾಲಯ ಪ್ರಸಾರ(,,)–ಕೆ. ಎಸ್. ದೇಶಪಾಂಡೆ
೧೭. ಭಾರತೀಯ ನಾಗರಿಕತೆಗೆ ಮನುವಿನ
ಕೊಡುಗೆ (ದ್ವಿ. ಆ.) –ಬಿ. ಎಚ್. ಶ್ರೀಧರ
೧೮. ಜನಸಂಖ್ಯೆ ಹಾಗು ಆಹಾರ ಸಮಸ್ಯೆ
–ಪಿ. ಎಂ. ಉಮಾಕಾಂತಶಾಸ್ತ್ರಿ
೧೯. ಸೌರವ್ಯೂಹ (ದ್ವಿ.ಆ.) –ಸಿ. ಎನ್. ಶ್ರೀನಿವಾಸ ಅಯ್ಯಂಗಾರ
೨೦. ಪ್ರಾಚೀನ ಭಾರತದಲ್ಲಿ ಸಾಮಾಜಿಕ ಜನಜೀವನ (ದ್ವಿ. ಆ.)
–ಸಿ. ವ್ಹಿ. ರಂಗಸ್ವಾಮಿ
೨೧. ಸಮಾಜ ಕಾರ್ಯ(ದ್ವಿ. ಆ.)–ಎಚ್. ಎಂ. ಮರುಳಸಿದ್ಧಯ್ಯ
೨೨. ಸಂಸತ್ತಿನ ಕಾರ್ಯಪದ್ಧತಿ (,,)–ಎ. ಎಂ. ರಾಜಶೇಖರಯ್ಯ
೨೩. ಕನ್ನಡನಾಡಿನ ಶಾಸನಗಳು (ದ್ವಿ. ಆ.) –ಪಿ. ಬಿ. ದೇಸಾಯಿ
೨೪. ಕವೀಂದ್ರ ರವೀಂದ್ರರು ( ,, ) –ಎಸ್. ಎಸ್. ಮಾಳವಾಡ
೨೫. ನಾಗಾನಂದ ( ,, ) –ಎಚ್.ಪಿ. ಮಲ್ಲೇದೇವರು
೨೬. ಜೀವನದಲ್ಲಿ ನಗೆ ( ,, ) –ಎಂ. ಎಸ್. ಸುಂಕಾಪುರ
೨೭. ಬಸವಣ್ಣನವರ ಯೋಜನೆಗಳು ( ,, ) –ಬಿ. ಸಿ. ಜವಳಿ

ಉಪನ್ಯಾಸ ಗ್ರಂಥಮಾಲೆ

೩೪

# ಕನ್ನಡಕ್ಕೆ ಶ್ರೀ ಪುರಂದರದಾಸರು ನೀಡಿದ ಕೊಡುಗೆ

ಪ್ರೊ. ಜಿ. ಡಿ. ನಾಡಕರ್ಣಿ, ಎಂ.ಎ.




ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಅಕ್ಟೋಬರ್, ೧೯೬೮

ಪ್ರಕಾಶಕರು :

**ಎಸ್. ಎಸ್. ಒಡೆಯರ,** ಎಂ.ಎ., ಎಲ್‌ಎಲ್. ಬಿ.

ರಜಿಸ್ಟ್ರರ್,

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಪ್ರಥಮ ಮುದ್ರಣ : ೨,೦೦೦ ಪ್ರತಿಗಳು (೧೯೬೪)

ದ್ವಿತೀಯ ಮುದ್ರಣ : ೩,೦೦೦ ಪ್ರತಿಗಳು (೧೯೬೮)

© ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

**ಬೆಲೆ : ೨೫ ಪೈಸೆ**

ಮುದ್ರಕರು :

**ಜಯಪ್ರಕಾಶ ಕಟ್ಟೀಮನಿ**

ಸಂಗಮ ಮುದ್ರಣಾಲಯ,

ಸಾಧನಕೇರಿ, ಧಾರವಾಡ-೧

# ಮುನ್ನುಡಿ

ನಮ್ಮ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ವಿಭಾಗವು ಗ್ರಾಮಾಂತರ ಪ್ರದೇಶಗಳಲ್ಲಿ ಪ್ರತಿ ತಿಂಗಳು ಏರ್ಪಡಿಸುತ್ತಿರುವ ಉಪನ್ಯಾಸ ಶಿಬಿರಗಳು ದಿನೇ ದಿನೇ ಜನಪ್ರಿಯವಾಗುತ್ತ ಸಾಗಿರುವುದು ನಿಜವಾಗಿಯೂ ಸಂತೋಷದ ಸಂಗತಿ. ಈ ಜ್ಞಾನಪ್ರಸಾರದ ಕಾರ್ಯದಲ್ಲಿ ಭಾಗವಹಿಸುವುದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕವೊದಗುವುದಲ್ಲದೆ ಎಂಥ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭವಾದ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೆ ಎಪ್ಪತ್ತೊಂಬತ್ತು ಪುಸ್ತಕಗಳು ಪ್ರಕಟವಾಗಿವೆ. ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ಎರಡು-ಮೂರು ಮುದ್ರಣಗಳನ್ನೂ ಕಂಡಿ

ರುವುದು ಈ ಮಾಲೆಯ ಉಪಯುಕ್ತತೆಯನ್ನೂ ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಧನಸಹಾಯ ಆಯೋಗದವರು ಉಪನ್ಯಾಸ ಶಿಬಿರಗಳಿಗೂ, ಈ ಪುಸ್ತಿಕೆಗಳ ಪ್ರಕಟನೆಗೂ ನೆರವು ನೀಡುತ್ತಿದ್ದು ಅವರಿಗೆ ವಿಶ್ವವಿದ್ಯಾಲಯವು ತನ್ನ ಕೃತಜ್ಞತೆಗಳನ್ನು ಸೂಚಿಸುತ್ತದೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖವಾದ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಎ. ಎಸ್. ಅಡಕೆ
ಕುಲಪತಿ
ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ-೩
೨೫-೧೦-೧೯೬೮

# ಲೇಖಕನ ಬಿನ್ನಹ

ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ಸಮಿತಿಯು ಕುಷ್ಟಗಿಯಲ್ಲಿ ಏರ್ಪಡಿಸಿದ ಉಪನ್ಯಾಸ ಶಿಬಿರದ ಅಂಗವಾಗಿ ದಿ.೨೮-೧೧-೧೯೬೩ ರಂದು ನಾನು ಇತ್ತ ಉಪನ್ಯಾಸದ ವಿಸ್ತೃತ ರೂಪವೇ ಈ ಚಿಕ್ಕ ಪುಸ್ತಕ.

ಶ್ರೀ ಪುರಂದರದಾಸರ ನಾಲ್ಕುನೂರನೆಯ ಉತ್ಸವದ ಸಂದರ್ಭದಲ್ಲಿಯೇ ಈ ಪುಸ್ತಕವನ್ನು ಕರ್ನಾಟಕ ವಿಶ್ವವಿದ್ಯಾಲಯವು ಪ್ರಕಟಿಸುತ್ತಿರುವುದು ತುಂಬಾ ಯೋಗ್ಯವಾದ ಮತ್ತು ಸಂತೋಷದ ಸಂಗತಿ. ಶ್ರೀ ಪುರಂದರದಾಸರಂಥ ಅಲೌಕಿಕ ಮಹಾನುಭಾವರ ಕಾರ್ಯ ಮತ್ತು ಸಿದ್ಧಿಗಳನ್ನು ಇಂಥ ಚಿಕ್ಕ ಪುಸ್ತಕದಲ್ಲಿ ಸಮರ್ಪಕವಾಗಿ, ಸಂಪೂರ್ಣವಾಗಿ ಬಣ್ಣಿಸುವುದು ಶಕ್ಯವಿಲ್ಲೆಂಬ ಮಾತನ್ನು ಬೇರೆ ಹೇಳಬೇಕಾಗಿಲ್ಲ. ಒಬ್ಬ ಮಹಾವ್ಯಕ್ತಿಯ ಅಲ್ಪ ಪರಿಚಯವನ್ನು ಮಾತ್ರ ಇಲ್ಲಿ ಮಾಡಿಕೊಡಲು ಪ್ರಯತ್ನಿಸಿರುವೆ. ಈ ಪುಸ್ತಕದ ಪ್ರಕಟನೆಯಲ್ಲಿ ವಿಶೇಷ ಆಸ್ಥೆವಹಿಸಿದ ವ್ಯಾಸಂಗ ವಿಸ್ತರಣ ಹಾಗೂ ಪ್ರಕಟನ ಶಾಖೆಯ ಡೈರೆಕ್ಟರರಾದ ಶ್ರೀ ಚೆನ್ನವೀರ ಕಣವಿಯವರಿಗೆ ನನ್ನ

ಕೃತಜ್ಞತೆಗಳು. ಮುದ್ರಣಕ್ಕಾಗಿ ಹಸ್ತಪ್ರತಿಯನ್ನು ತಯಾರಿಸು ವಲ್ಲಿ ನೆರವಾದ ನನ್ನ ವಿದ್ಯಾರ್ಥಿಮಿತ್ರ ಶ್ರೀ ಕೆ. ಬಿ. ಪಾಟೀಲ ಕುಲಕರ್ಣಿ ಅವರಿಗೆ ನಾನು ಉಪಕೃತನಾಗಿದೇನೆ.

೪ ಫೆಬ್ರುವರಿ, ೧೯೬೪
ಜೆ. ಎಸ್. ಎಸ್. ಕಾಲೇಜ
ಧಾರವಾಡ

ಜಿ. ಡಿ. ನಾಡಕರ್ಣಿ

# ವಿಷಯಸೂಚಿಕೆ


| | | |
|---|---|---|
| | ಮಾಲೆಯ ಮುನ್ನುಡಿ | i |
| | ಲೇಖಕನ ಬಿನ್ನಹ | iii |
| ೧ | ಶ್ರೀ ಪುರಂದರದಾಸರ ಭಕ್ತಿ ಮತ್ತು ವೈರಾಗ್ಯ | ೧ |
| ೨ | ಶ್ರೀ ಪುರಂದರದಾಸರ ಸಮಾಜದರ್ಶನ ಮತ್ತು ಬೋಧೆ | ೧೯ |
| ೩ | ಶ್ರೀ ಪುರಂದರದಾಸರ ಕೀರ್ತನೆಗಳಲ್ಲಿಯ ಸೊಗಸು | ೪೦ |
| ೪ | ಶ್ರೀ ಪುರಂದರದಾಸರ ವ್ಯಕ್ತಿತ್ವ | ೪೭ |

# ಕನ್ನಡಕ್ಕೆ ಶ್ರೀ ಪುರಂದರದಾಸರು ನೀಡಿದ ಕೊಡುಗೆ

ಮನ್ಮನೋಽಭೀಷ್ಟವರದಂ ಸರ್ವಾಭೀಷ್ಟ ಫಲಪ್ರದಮ್ ।
ಪುರಂದರಗುರುಂ ವಂದೇ ದಾಸಶ್ರೇಷ್ಠಂ ದಯಾನಿಧಿಮ್ ॥

“ ದಾಸರೆಂದರೆ ಪುರಂದರ ದಾಸರಯ್ಯ ”

## ೧. ಶ್ರೀ ಪುರಂದರದಾಸರ ಭಕ್ತಿ ಮತ್ತು ವೈರಾಗ್ಯ

ಅನೇಕ ಧರ್ಮಗಳ ಬೀಡಾದ ಕರ್ನಾಟಕವು ಮೊದಲಿನಿಂದಲೂ ಭಕ್ತರ ತೌರೂರಾಗಿದೆ. ಭಕ್ತಿಮಾರ್ಗವು ವಿಶೇಷವಾಗಿ ಕನ್ನಡನಾಡಿನಲ್ಲಿ ಬೆಳೆದಿದೆ. ಒಂದು ಕಾಲದಲ್ಲಿ ಶಿವಶರಣರೂ ಇನ್ನೊಂದು ಕಾಲದಲ್ಲಿ ಹರಿದಾಸರೂ ಪರಂಪರೆಯಿಂದ ಉದಯ ಹೊಂದಿ ತಮ್ಮ ಭಕ್ತಿ, ಉಪದೇಶಗಳಿಂದ ಈ ನಾಡನ್ನು ಪಾವನವಾಗಿಸಿದ್ದಾರೆ. ಅಂಥ ಹಿರಿಯ ಭಕ್ತರ ಪರಂಪರೆಯಲ್ಲಿ ಶ್ರೀ ಪುರಂದರದಾಸರು ಅಗ್ರಗಣ್ಯರಾಗಿದ್ದಾರೆ.

ಅವರ ವೈರಾಗ್ಯ-ಭಕ್ತಿಗಳ ಸ್ವರೂಪವೇನು? ಅವರು ಸಮಾಜದ ದೋಷಗಳನ್ನು ಹೇಗೆ ಖಂಡಿಸಿದ್ದಾರೆ? ಕನ್ನಡ ಸಾಹಿತ್ಯಕ್ಕೆ, ಸಂಸ್ಕೃತಿಗೆ ಅವರು ನೀಡಿದ ಕೊಡುಗೆ ಏನು ?—ಇತ್ಯಾದಿ ವಿಷಯಗಳನ್ನು ಸಂಕ್ಷೇಪವಾಗಿ ಶ್ರೀ ದಾಸರ ಚತುಃಶತ ಸಾಂವತ್ಸರಿಕೋತ್ಸವದ ಪ್ರಸಂಗದಲ್ಲಿಯಾದರೂ ತಿಳಿದುಕೊಳ್ಳುವುದು ಅತ್ಯವಶ್ಯವಾಗಿದೆ. ಅವರ ಮಹಾ ಕಾರ್ಯದ ಅಲ್ಪ ಪರಿಚಯುವನ್ನು ಮಾಡಿಕೊಳ್ಳುವ ಪ್ರಯತ್ನವನ್ನು ಮಾತ್ರ ಇಲ್ಲಿ ಮಾಡಲಾಗಿದೆ.

ಶ್ರೀ ಪುರಂದರದಾಸರ ಜೀವನದ ಬಗ್ಗೆ ಅನೇಕಾನೇಕ ದಂತಕಥೆಗಳು ಹುಟ್ಟಿಕೊಂಡಿವೆ. ಅವುಗಳನ್ನೆಲ್ಲ ಸಂಶೋಧಿಸಿ ಅವರ ಜೀವನದ ಮಹತ್ವದ ಘಟನೆಗಳ ಬಗ್ಗೆ ಶಾಸ್ತ್ರೀಯವಾದ ರೀತಿಯಲ್ಲಿ ಸಂಶೋಧನೆ ಮಾಡುವುದು ಅವಶ್ಯವಾಗಿದೆ. ಈಗ ಸಾಮಾನ್ಯವಾಗಿ ಎಲ್ಲರೂ ಒಪ್ಪಿದಂತೆ, ಶ್ರೀ ಪುರಂದರರು ಪ್ರಾರಂಭದಲ್ಲಿ ಪುರಂದರಗಡದಲ್ಲಿ ಸಾಹುಕಾರ ವರದಪ್ಪನ ಮಗನಾಗಿ ಜನಿಸಿ ಶ್ರೀನಿವಾಸನೆಂಬ ನಾಮಧೇಯದಿಂದ ಸಾಹುಕಾರಿಕೆಯನ್ನು ಮಾಡಿಕೊಂಡು ಲೌಕಿಕ ಭೋಗದಲ್ಲಿ ಆಸಕ್ತರಾಗಿದ್ದರು. ಈ ಶ್ರೀನಿವಾಸ ನಾಯಕರಿಗೆ ನಾಲ್ವರು ಪುತ್ರರು ಹುಟ್ಟಿದರು. ವರದಪ್ಪ, ಗುರಪ್ಪ, ಅಭಿನವಪ್ಪ ಮತ್ತು ಮಧ್ವಪತಿ ಎಂಬುವೇ ಆ ನಾಲ್ವರ ಹೆಸರುಗಳು. ಶ್ರೀನಿವಾಸ ನಾಯಕರನ್ನು ಉದ್ಧರಿಸಲು ಒಬ್ಬ ಬಡ ಬ್ರಾಹ್ಮಣನ ವೇಷದಲ್ಲಿ ಪರಮಾತ್ಮನೇ ಬಂದು ಅವರ ಪತ್ನಿಯಲ್ಲಿ ದ್ರವ್ಯ ಸಹಾಯವನ್ನು ಯಾಚಿಸಿದನು. ಆಗ ಶ್ರೀನಿವಾಸರ ಪತ್ನಿ

ಸರಸ್ವತಿ ತನ್ನ ಪತಿಗೆ ಗೊತ್ತಾಗದಂತೆ ತನ್ನ ನತ್ತನ್ನು (ಅಥವಾ ಮೂಗುತಿಯನ್ನು) ದಾನವಾಗಿ ಕೊಟ್ಟಳು. ಆ ಬಡ ಬ್ರಾಹ್ಮಣನು ಆ ನತ್ತನ್ನು ತೆಗೆದುಕೊಂಡು ಮಾರಾಟ ಮಾಡುವುದಕ್ಕೆ ಶ್ರೀನಿವಾಸ ನಾಯಕರ ಅಂಗಡಿಗೇ ಹೋದನು. ಆಗ ನಾಯಕರಿಗೆ ಅದು ತಮ್ಮ ಹೆಂಡತಿಯ ನತ್ತೇ ಇರ ಬೇಕೆಂದು ಸಂಶಯ ಹುಟ್ಟಿ ಮನೆಗೆ ಬಂದು ಪತ್ನಿಯನ್ನು ಕೇಳಿದರು. ಜಿಪುಣನಾದ ಪತಿಯೆದುರು ನಿಜಸಂಗತಿಯನ್ನು ಹೇಳಲು ಹೆದರಿದ ಆ ಸಾಧ್ವಿಯು ಇನ್ನು ವಿಷ ತೆಗೆದುಕೊಂಡು ಸಾಯುವುದೇ ಮೇಲೆಂದು ವಿಷದ ಬಟ್ಟಲನ್ನು ಮೇಲೆತ್ತಿದಾಗ ಆ ನತ್ತು ಮೇಲಿನಿಂದ ಆ ಬಟ್ಟಲಲ್ಲಿ ಬಿದ್ದಿತು. ಆಶ್ಚರ್ಯ ದಿಂದ ಅವಳು ಅದನ್ನು ತನ್ನ ಪತಿಗೆ ಒಯ್ದು ಕೊಟ್ಟಳು. ಶ್ರೀನಿವಾಸ ನಾಯಕರು ಮತ್ತೆ ಅಂಗಡಿಗೆ ಬಂದು ನೋಡ ಲಾಗಿ ಅಲ್ಲಿ ನತ್ತು ಇರಲಿಲ್ಲ. ಆಗ ಮನೆಗೆ ಬಂದು ಹೆಂಡತಿ ಯಿಂದ ಎಲ್ಲ ವಿಷಯ ತಿಳಿದ ಮೇಲೆ ಯಾಚಕನಾಗಿ ಬಂದ ಆ ಬಡಬ್ರಾಹ್ಮಣನು ಶ್ರೀಹರಿಯೇ ಎಂಬ ನಂಬಿಕೆ ಹುಟ್ಟಿತು; ತೀವ್ರವಾದ ವೈರಾಗ್ಯವು ಅವರಲ್ಲಿ ಉದಯವಾಯಿತು.

ಈ ಕಥೆಯು ನಿಜವಾದುದು ಎಂಬುದಕ್ಕೆ ಶ್ರೀ ಪುರಂದರ ದಾಸರ ಒಂದು ಹಾಡು ಪುಷ್ಟಿಯನ್ನೀಯುತ್ತದೆ.

“ ಗೋಪಾಳ ಬುಟ್ಟಿ ಹಿಡಿಯುವದಕ್ಕೆ ।
ಭೂಪತಿಯೆಂದು ಗರ್ವಿಸುತಿದ್ದೆ ।
ಆ ಪತ್ನೀಕುಲ ಸಾವಿರವಾಗಲಿ ।
ಗೋಪಾಳಬುಟ್ಟಿ ಹಿಡಿಸಿದಳಯ್ಯ ॥ ”

ಎಂದು ಅವರೇ ಒಪ್ಪಿಕೊಂಡಿದ್ದಾರೆ. ಆ ಹಾಡಿನ ಪ್ರಾರಂಭವು-

" ಆದದ್ದೆಲ್ಲ ಒಳಿತೇ ಆಯಿತು ।
ನಮ್ಮ ಶ್ರೀಧರನ್ನ ಸೇವೆಗೆ ಸಾಧನ ಸಂಪತ್ತಾಯಿತು ॥ "

ಎಂದಿದೆ. ಮುಂದೆ ಶ್ರೀನಿವಾಸನಾಯಕರು ತಮ್ಮ ಸಂಪತ್ತನ್ನೆಲ್ಲ ದಾನಮಾಡಿಬಿಟ್ಟು ದಾಸರಾಗಿ ಶ್ರೀ ವ್ಯಾಸರಾಯ ಸ್ವಾಮಿಗಳಿಂದ ಮಂತ್ರೋಪದೇಶ ಪಡೆದು ಗುರುಗಳು ಕೊಟ್ಟ "ಪುರಂದರ ವಿಠ್ಠಲ"ವೆಂಬ ಅಂಕಿತದಿಂದ ನಾಲ್ಕು ಲಕ್ಷ ಎಪ್ಪತ್ತೈದು ಸಾವಿರ ಕೀರ್ತನೆಗಳನ್ನು ರಚಿಸಿದರು, ಜನತೆಯಲ್ಲಿ ಭಕ್ತಿಯನ್ನು ಪ್ರಸಾರಮಾಡಿದರು. ಮುಂದೆ ಅವರ ಜೀವನ ಹರಿಸಮರ್ಪಿತವಾಯಿತು. ತಮಗೆ ಉಂಟಾದ ತೀವ್ರವೈರಾಗ್ಯವನ್ನೂ, ಭಕ್ತಿಯ ಮಹಿಮೆಯನ್ನೂ ಇತರರಿಗೂ ಬೋಧಿಸುವ ಘನೋದ್ದೇಶದಿಂದ ಅವರು ತಂಬೂರಿಯನ್ನು ಕೈಯಲ್ಲಿ ಹಿಡಿದು ಅನೇಕ ಕಡೆಗೆ ಸಂಚರಿಸಿದರು. ಅನೇಕ ಕ್ಷೇತ್ರಗಳ ಹೆಸರುಗಳು ಅವರ ಕೀರ್ತನೆಗಳಲ್ಲಿಯೇ ಉಲ್ಲೇಖಿಸಲ್ಪಟ್ಟಿವೆ. ಭಾರತದ ಮತ್ತು ಕರ್ನಾಟಕದ ಎಷ್ಟೋ ಪುಣ್ಯಕ್ಷೇತ್ರಗಳನ್ನೂ, ಗ್ರಾಮ-ನಗರಗಳನ್ನೂ ಅವರು ಸಂದರ್ಶಿಸಿರಬೇಕು. ಈ ವೇಳೆಗೆ ಅವರು ಅನೇಕ ಮತ-ಪಂಥಗಳ, ವಿವಿಧ ಸ್ವಭಾವದ ಜನರನ್ನು ಕಂಡಿರಬೇಕು. ಭಿನ್ನ ಪ್ರಕೃತಿಯ ವ್ಯಕ್ತಿಗಳನ್ನು ಅವರು ಕಂಡಿದ್ದರೆಂಬುದು ಅವರ ಹಾಡುಗಳಲ್ಲಿಯೇ ಸ್ಪಷ್ಟವಾಗಿ ಕಂಡುಬರುತ್ತದೆ. ಪುರಂದರ ದಾಸರ ಭಕ್ತಿ, ಏಕಾಂತ ಜೀವನದಷ್ಟೇ ಅವರ ಲೋಕಾನು-ಭವವೂ ಅವರ ವ್ಯಕ್ತಿತ್ವದ ಒಂದು ಮಹತ್ವದ ಅಂಗವಾಗಿದೆ.

ಲೌಕಿಕ ಐಶ್ವರ್ಯ, ಸುಖಗಳ ನಿಸ್ಸಾರತೆಯನ್ನು ಕಂಡು ವೈರಾಗ್ಯತಾಳಿದ ಮೇಲೆ ಅವರು ತಮ್ಮ ಪೂರ್ವ-ಜೀವನದ ವಿಮರ್ಶೆ ಮಾಡಿಕೊಂಡರು. ಲೋಭಿಯಾಗಿ ತಾನೆಂಥ ಅಪರಾಧಗಳನ್ನು ಮಾಡಿದ್ದೇನೆ ಎಂದು ಅವರು ಪಶ್ಚಾತ್ತಾಪಪಟ್ಟರು. ಅವರ ಒಂದು ಸುಂದರವಾದ ಹಾಡಿನಲ್ಲಿ ಅವರೇ ಹೇಳಿದ್ದಾರೆ :

" ಇಷ್ಟು ಪಾಪವ ಮಾಡಿದ್ದೆ ಸಾಕು ।
ಸೃಷ್ಟೀಶನೆ ಎನ್ನನುದ್ಧರಿಸಬೇಕು ॥
ಒಡಲಕಿಚ್ಚಿಗೆ ಪರರ ಕಡುನೋಯಿಸಿದೆ ಕೃಷ್ಣ ।
ಕೊಡದೆ ಅನ್ಯರ ಋಣವನಪಹರಿಸಿದೆ ॥
ವ್ರತ ನೇಮ ಉಪವಾಸವೊಂದು ದಿನ ಮಾಡಿಲ್ಲ ।
ಅತಿಥಿಗಳಿಗನ್ನವನು ನೀಡಲಿಲ್ಲ ॥
ಶುದ್ಧ ವೈಷ್ಣವಕುಲದಲುದ್ಭವಿಸಿದೆ ನಾನು ।
ಮಧ್ವಮತಸಿದ್ಧಾಂತ ಪದ್ಧತಿಗಳ ॥
ಬುದ್ಧಿಪೂರ್ವಕ ತಿಳಿದು ಕದ್ದುಂಡು ಕಾಯವನು ।
ವೃದ್ಧಿಮಾಡಿದೆನಯ್ಯ ಉದ್ಧರಿಸು ಹರಿಯೆ ॥ "

ಅವರಿಗೆ ಉಂಟಾದ ವೈರಾಗ್ಯವು ಸ್ಮಶಾನವೈರಾಗ್ಯ-ವಾಗಿರದೆ ಶಾಶ್ವತವೂ, ತೀವ್ರವೂ ಆದ ವೈರಾಗ್ಯವಾಗಿತ್ತು. ಮೊದಲನೆಯದಾಗಿ ಲೌಕಿಕಸೌಖ್ಯ ಕೊಡತಕ್ಕ ಹೊನ್ನು, ಹೆಣ್ಣು, ಮಣ್ಣು ಮೊದಲಾದವುಗಳು ನಶ್ವರವಾಗಿವೆ; ಎರಡನೆಯದಾಗಿ ಇವುಗಳನ್ನು ಅನುಭವಿಸುವ ವ್ಯಕ್ತಿಯ ಶರೀರವೂ ಅಶಾಶ್ವತ-ವಾಗಿದೆ. ಅವರು ತಮ್ಮ ಒಂದು ಹಾಡಿನಲ್ಲಿ ಕೇಳುತ್ತಾರೆ:

" ಆರು ಹಿತವರು ನಿನಗೆ ಮೂರು ಮಂದಿಗಳೊಳಗೆ ।
ನಾರಿಯೋ ಧಾರಿಣಿಯೋ ಬಲುಧನದ ಸಿರಿಯೋ ? ॥
ಅನ್ಯರಲಿ ಜನಿಸಿರ್ದ ಅಂಗನೆಯು ಕರೆತಂದು ।
ತನ್ನ ಮನೆಗವಳ ಯಜಮಾನಿಯೆನಿಸಿ ॥
ಭಿನ್ನವಿಲ್ಲದಲರ್ಧ ದೇಹವೆನಿಸುವ ಸತಿಯು ।
ಕಣ್ಣಿನಲಿ ನೋಡಲಮ್ಮಳು ಕಾಲವಶದಿ ॥"

ಅದರಂತೆಯೇ ಮುನ್ನ ಶತಕೋಟಿ ಅರಸರಾಳಿದ ನೆಲವನ್ನು ತನ್ನದೆಂದು ಶಾಸನವ ಬರೆಯಿಸಿದ ಮಹಾರಾಜನ ವೈಭವವೆಲ್ಲವೂ ಅವನ ದೇಹದಲ್ಲಿ ಪ್ರಾಣವಿರುವವರೆಗೆ ಮಾತ್ರ. ಉದ್ಯೋಗ, ವ್ಯವಹಾರಗಳಿಂದ ಗಳಿಸಿದ ಸಂಪತ್ತು ಯಾರೊಡನೆಯೂ ಬರುವದಿಲ್ಲ. ಹಾಗಾದರೆ ಸತ್ತಮೇಲೆ ಜೊತೆಗೆ ಯಾರು ಬರುತ್ತಾರೆ ? " ಲೋಕದೊಳು ಗಳಿಸಿರ್ದ ಪುಣ್ಯಪಾಪಗಳೆರಡು ಸಾಕಾರವಾಗಿ ಸಂಗಡ ಬಾಹೋದಲ್ಲದೆ " ಅನ್ಯರಾರು ಜೊತೆಗೆ ಬರುವುದಿಲ್ಲ. ಆದ್ದರಿಂದ—" ಅಸ್ಥಿರದ ದೇಹವನು ನೆಚ್ಚಿ ನಂಬಿರಬೇಡ ಸ್ವಸ್ಥದಲಿ ನೆನೆ ಕಂಡ್ಯ ಹರಿ ಪಾದವ " ಎಂದು ಹೇಳಿದ್ದಾರೆ.

ಇನ್ನೊಂದು ಹಾಡಿನಲ್ಲಿ ಅವರು ಎಲ್ಲರಿಗೂ ಎಚ್ಚರಿಕೆಯನ್ನಿತ್ತಿದ್ದಾರೆ :

" ನೆಚ್ಚದಿರೀ ಭಾಗ್ಯ ಯಾರಿಗೂ ಸ್ಥಿರವಲ್ಲ ನಿಶ್ಚಯವೆಚ್ಚರಿಕೆ ।
ಹೆಚ್ಚದೆ ಹಿಗ್ಗದೆ ಇದ್ದರೆ ಲೋಕಕ್ಕೆ ಮೆಚ್ಚು ಕೇಳೆಚ್ಚರಿಕೆ ॥
ಪೊಡವಿಪನೊಲುಮೆಯು ಕಡು ನೆಚ್ಚಿ ಗರ್ವದಿ
ನಡೆಯದಿರೆಚ್ಚರಿಕೆ ।
ಕೊಡನ ಅಂಥಕ ಪೊತ್ತು ನಡೆವಂತೆ ಅಧಿಕಾರ
ಕಡೆಯಲ್ಲಿ ಎಚ್ಚರಿಕೆ ॥ "

ಮೇಲಾಗಿ ಮಾನವನ ಆಯುಷ್ಯ ಕ್ಷಣಕ್ಷಣಕ್ಕೂ ಸರಿಯುತ್ತದೆ :

" ಸೆರೆ ಛಿದ್ರಕುಂಭದ ನೀರಿನಂತಾಯುಷ್ಯ ಸರಿಯುತಿದೆಚ್ಚರಿಕೆ ।
ವರದ ಪುರಂದರವಿಠಲನ ಚರಣವ ಮರೆಯದಿರೆಚ್ಚರಿಕೆ ॥ "

ಲೌಕಿಕ ಭಾಗ್ಯವು ಅದೆಷ್ಟೇ ವಿಪುಲವಾಗಿದ್ದರೂ ಅದೆಲ್ಲಾ ವ್ಯರ್ಥ, ಲೊಳಲೊಟ್ಟೆ :

" ಲೊಳಲೊಟ್ಟೆ ಎಲ್ಲಾ ಲೊಳಲೊಟ್ಟೆ ।
ಆನೆ ಕುದುರೆ ಒಂಟೆ ಲೊಳಲೊಟ್ಟೆ ।
ಬಲು ಸೇನೆ ಭಾಂಡಾರವು ಲೊಳಲೊಟ್ಟೆ ॥
ಕಂಟಕರೆಂಬೋದು ಲೊಳಲೊಟ್ಟೆ ।
ನಮ್ಮ ನೆಂಟರು ಇಷ್ಟರು ಲೊಳಲೊಟ್ಟೆ ॥ "

ಭಾರತೀಯ ತತ್ವಜ್ಞಾನದ ತಳಹದಿ, ಒಳಉಸಿರು ಇದೇ ಆಗಿದೆ. ವೈದಿಕ ಸಿದ್ಧಾಂತಗಳಿರಲಿ ಅಥವಾ ಅವೈದಿಕವಾದ ಜೈನ-ಬೌದ್ಧ ದರ್ಶನಗಳಿರಲಿ; ಎಲ್ಲ ದರ್ಶನಗಳಲ್ಲಿಯೂ ಪ್ರಾರಂಭದ ಮಾತು, ರನ್ನ ಕವಿಯು ಹೇಳುವಂತೆ–" ಅಸಾರಮೀ ಸಂಸಾರಂ; ನಿಕೃಷ್ಟಮೀ ಸಂಸಾರಂ ". ಈ ಸಂಸಾರವನ್ನು ಮಾನವ ನಂಬುವಂತಿಲ್ಲ. ವೀರಶೈವ ಶರಣರ ವಚನಗಳಲ್ಲಿಯೂ ಸಂಸಾರವು ಹೇಯವಾದುದು ಎಂಬ ಮಾತನ್ನು ಮಾರ್ಮಿಕವಾಗಿ ಬಣ್ಣಿಸುವ ವಚನಗಳು ಇದ್ದೇ ಇವೆ. ಮಹಾದೇವಿಯಕ್ಕನು ತನ್ನ ಒಂದು ಪ್ರಸಿದ್ಧ ವಚನದಲ್ಲಿ ಹೀಗೆ ಹೇಳಿದ್ದಾಳೆ– " ಅಮೇಧ್ಯದ ಹಡಿಕೆ, ಮೂತ್ರದ ಕುಡಿಕೆ, ಎಲುವಿನ ತಡಿಕೆ, ಕೀವಿನ ಹಡಿಕೆ, ಸುಡಲೀ ದೇಹವ–ಒಡಲು ವಿಡಿದು ಕೆಡದಿರು–ಚೆನ್ನಮಲ್ಲಿಕಾರ್ಜುನನರಿ ಮರುಳೇ ! "

ಇದೇ ಅಭಿಪ್ರಾಯವು ಪುರಂದರದಾಸರ ಅನೇಕ ಹಾಡುಗಳಲ್ಲಿ ವ್ಯಕ್ತವಾಗಿದೆ–

“ ನೆಲೆಯು ಇಲ್ಲದ ಕಾಯವೆಲುಬಿನ ಪಂಜರ ।
ಒಲಿದು ಸುತ್ತಿದ ಚರ್ಮದ ಹೊದಿಕೆ ॥
ಮಲಮೂತ್ರಗಳಿರವು ಕೀವು ಕ್ರಿಮಿಗಳು ।
ಬರಿಯ ತೊಗಲ ಮೆಚ್ಚಿ ಕೆಡಬೇಡಿರೋ ॥ ”

ಜಗತ್ತು ನಶ್ವರವಾಗಿರುವುದರ ಜೊತೆಗೆ ಚಿಂತೆಯ ಬೀಡೂ ಆಗಿದೆ. ಚಿಂತೆಯಿಲ್ಲದ ಪ್ರಾಣಿ ಇಲ್ಲ.

“ ಅನುಗಾಲವು ಚಿಂತೆ ಜೀವಕ್ಕೆ ।
ತನ್ನ ಮನವು ಶ್ರೀರಂಗನೊಳ್ ಮೆಚ್ಚುವತನಕ ॥
ಸತಿಯು ಇದ್ದರೆ ಚಿಂತೆ ।
ಸತಿಯಿಲ್ಲದ ಚಿಂತೆ ।
ಮತಿಹೀನ ಸತಿಯಾದರು ಚಿಂತೆಯು ॥
ಮಕ್ಕಳಿಲ್ಲದ ಚಿಂತೆ ।
ಮಕ್ಕಳಾದರು ಚಿಂತೆ ॥ ”

ಇಷ್ಟೇ ಅಲ್ಲ, ದೇವತೆಗಳಿಗೂ ಕೂಡ ಚಿಂತೆ ತಪ್ಪಿಲ್ಲ :

“ ಬ್ರಹ್ಮನಿಗೆ ಶಿರ ಹೋಗಿ ಬಾಡಿ ಬಳಲುವ ಚಿಂತೆ ।
ಮುನ್ನ ಮಾರುತಿಗೆ ಕಪಿಯಾದ ಚಿಂತೆ ।
ಕಣ್ಣು ಮೂರುಳ್ಳವಗೆ ತಿರಿದುಂಬ ಚಿಂತೆ ॥ ”

ಇಂಥ ನಶ್ವರವಾದ, ಚಿಂತೆಯಿಂದ ಕೂಡಿದ ಜಗತ್ತಿನಲ್ಲಿ ನಾವು ಏಕೆ ಹುಟ್ಟಿ ಬರುತ್ತೇವೆ? ಒಂದು ಸಲ ಮಾತ್ರವಲ್ಲ– ಅಸಂಖ್ಯ ಸಲ ಜನ್ಮತಾಳುತ್ತೇವೆ. ಕೆಲವು ಕಾಲ ಇಲ್ಲಿ ಇದ್ದು

ಮರಣವನ್ನು ಹೊಂದಿ–ಎಂದರೆ ಹಳೆಯ ಬಟ್ಟೆ ಬಿಟ್ಟುಕೊಟ್ಟು ಹೊಸ ಬಟ್ಟೆ ಧರಿಸಿದಂತೆ–ಮತ್ತೊಂದು ಶರೀರವನ್ನು ಪಡೆಯುತ್ತೇವೆ. ಈ ಅವ್ಯಾಹತವಾದ ಸಂಸಾರಚಕ್ರಕ್ಕೆ ಕಾರಣವು ಯಾವುದು ? ಇದರಿಂದ ಬಿಡುಗಡೆ ಹೊಂದುವುದು ಸಾಧ್ಯವೇ ? ಇಂಥ ಪ್ರಶ್ನೆಗಳಿಗೆ ಭಾರತೀಯ ತತ್ವಜ್ಞಾನವು ಎರಡು ರೀತಿಯಿಂದ ಉತ್ತರವಿತ್ತಿದೆ; ಒಂದು ಅದ್ವೈತ ಸಿದ್ಧಾಂತದ – ಜ್ಞಾನಮಾರ್ಗದ ರೀತಿಯದು, ಇನ್ನೊಂದು ದ್ವೈತಸಿದ್ಧಾಂತದ–ಭಕ್ತಿಮಾರ್ಗದ ರೀತಿಯದು. ಅದ್ವೈತ ಮತದ ಪ್ರಕಾರ ಜಗತ್ತು ಸತ್ಯವಲ್ಲ; ಮಿಥ್ಯೆ. ಬ್ರಹ್ಮ ಒಂದೇ ಸತ್ಯ. ಜೀವರುಗಳು ಅಸಂಖ್ಯರಲ್ಲ; ಒಂದೇ ಒಂದು ಆತ್ಮ-ತತ್ವವು ಎಲ್ಲೆಡೆಗೂ ವ್ಯಾಪಿಸಿದೆ; ಜೀವ ಮತ್ತು ಬ್ರಹ್ಮರು ಬೇರೆ ಅಲ್ಲ; "ಜೀವೋ ಬ್ರಹ್ಮೈವ ನಾಪರಃ". ಈ ಮಹಾ ಸತ್ಯವನ್ನು ನಾವು ಮಾಯೆಯನ್ನು ಮೀರಿದಾಗ, ಬ್ರಹ್ಮಜ್ಞಾನಿಯಾದಾಗ ಮಾತ್ರ ಕಾಣಬಲ್ಲೆವು, ಅನುಭವಿಸಬಲ್ಲೆವು. ಇದು ಜ್ಞಾನದಿಂದ ಲಭಿಸತಕ್ಕ ಅನುಭವ. ದ್ವೈತಸಿದ್ಧಾಂತದ ಪ್ರಕಾರ–ಜಗತ್ತು ಸತ್ಯ, ಮಾಯೆಯಲ್ಲ. ಶ್ರೀಹರಿಯ ಪ್ರೇರಣೆಯಿಂದ ಎಲ್ಲವೂ ನಡೆಯುತ್ತದೆ. ಜೀವರು ಅನೇಕರು; ಅವರಲ್ಲಿ ತಾರತಮ್ಯವಿದೆ. ಜೀವನು ಅಸ್ವತಂತ್ರನು, ಅಪೂರ್ಣಜ್ಞಾನಿಯು. ಪರಮಾತ್ಮನ ದಯೆಯಿಂದ ಮಾತ್ರ ಉದ್ಧಾರ ಹೊಂದಬಲ್ಲವನು. ಆ ಪರಮಾತ್ಮನ ದಯೆಯು ಭಕ್ತಿಯಿಂದ ದೊರಕುತ್ತದೆ. ಹೀಗಾಗಿ ದ್ವೈತಸಿದ್ಧಾಂತದಲ್ಲಿ ಸ್ವಾಭಾವಿಕವಾಗಿ ಭಕ್ತಿಗೆ ಪ್ರಾಮುಖ್ಯತೆ ದೊರೆಯುತ್ತದೆ.

ಶ್ರೀ ಪುರಂದರದಾಸರು ದ್ವೈತಸಿದ್ಧಾಂತವನ್ನು ನಂಬಿದವರು; ಮಾಧ್ವತತ್ವಜ್ಞಾನದಲ್ಲಿ ಆಳವಾದ ನಿಷ್ಠೆಯುಳ್ಳವರು. ಶ್ರೀಹರಿಯ ನಾಮಸ್ಮರಣೆ ಇತ್ಯಾದಿಗಳಿಂದ ಯುಕ್ತವಾದಭಕ್ತಿಯಿಂದ ಪ್ರತಿಯೊಬ್ಬ ಜೀವಿಯು ಪರಮಾತ್ಮನ ಕೃಪೆಗೆ ಪಾತ್ರನಾಗಿ, ಪ್ರಾರಬ್ಧ–ಸಂಚಿತ–ಆಗಾಮಿ ಕರ್ಮಗಳನ್ನು ಸುಟ್ಟು, ಮುಕ್ತಿಯನ್ನು ಹೊಂದಬಲ್ಲನು. "ಮಧ್ವಮತದ ಸಿದ್ಧಾಂತದ ಪದ್ಧತಿ ಬಿಡಬೇಡ । ಬಿಟ್ಟು ಕೆಡಬೇಡ ॥" ಎಂದೂ " ಮಧ್ವಮತಾಬ್ಧಿಯೊಳು ಮೀನಾಗಿರಲು ಬೇಕು " ಎಂದೂ ಅವರು ಉಪದೇಶಿಸಿದ್ದಾರೆ.

"ಸತ್ಯಂ ಜಗತಿದು ಪಂಚಭೇದವು ।
ನಿತ್ಯ ಶ್ರೀ ಗೋವಿಂದನ ॥
ಕೃತ್ಯ ತಿಳಿದು ತಾರತಮ್ಯದಿ ।
ಕೃಷ್ಣನಧಿಕನೆಂದು ಸಾರಿರೈ ॥ "

ಎಂಬ ಹಾಡಿನಲ್ಲಿ ಮಾಧ್ವತತ್ವಜ್ಞಾನದ ಮುಖ್ಯಾಂಶಗಳು ವ್ಯಕ್ತವಾಗಿವೆ.

ಜೀವನಬಂಧನಕ್ಕೆ ಕಾರಣವೇನು ? ಕರ್ಮವೇ ಅದಕ್ಕೆ ಮುಖ್ಯ ಕಾರಣ. ಪಾಪಕರ್ಮದಿಂದ ಕೀಳು ಯೋನಿಯಲ್ಲಿ ಜನ್ಮವೂ, ಪುಣ್ಯಕರ್ಮದಿಂದ ಉಚ್ಚಜನ್ಮವೂ ಬಂದೇ ಬರುವುದು. ಈ ಜನ್ಮಚಕ್ರದಿಂದ ಬಿಡುಗಡೆ ಹೊಂದಬೇಕಾದರೆ ವ್ಯಕ್ತಿಯು ನಿಷ್ಕಾಮಕರ್ಮ ಮಾಡಬೇಕು; ಎಂದರೆ ಎಲ್ಲವನ್ನೂ ಶ್ರೀಹರಿಗೆ ಸಮರ್ಪಿಸಬೇಕು. " ನಾಹಂ ಕರ್ತಾ, ಹರಿಃ ಕರ್ತಾ " ಎಂಬ ಭಾವನೆಯಿಂದ ಕರ್ಮವನ್ನಾಚರಿಸಬೇಕು.

ಎಲ್ಲವೂ ಆತನ ಪ್ರೇರಣೆಯೆಂದು ತಿಳಿದು ಆಚರಿಸಬೇಕು; ಅದರ ಫಲವನ್ನೂ ಆತನಿಗೇ ಸಮರ್ಪಿಸಬೇಕು. ಅಲ್ಲದೆ ಸದಾ ಪರಮಾತ್ಮನಲ್ಲಿ ಅನನ್ಯ ಭಕ್ತಿಯಿಂದಿರಬೇಕು. ಆತನ ಒಲುಮೆ, ಕೃಪೆ ಎಂದು ಉದಯಿಸುವುದೋ ಅಂದೇ ಭಕ್ತ-ನಿಗೆ ಮುಕ್ತಿ, ಬಿಡುಗಡೆ.

ಶ್ರೀ ಪುರಂದರರು ಪರಮಾತ್ಮನಲ್ಲಿ ಅತ್ಯಂತ ನಿಷ್ಠೆಯುಳ್ಳ ಹಿರಿಯ ಭಕ್ತರು. "ದಾಸರೆಂದರೆ ಪುರಂದರದಾಸರಯ್ಯ" ಎಂಬ ಪ್ರಶಂಸೆಯನ್ನು ತಮ್ಮ ಗುರುಗಳಿಂದಲೇ ಪಡೆದಿದ್ದ ರೆಂದ ಮೇಲೆ ಅವರ ಹಿರಿಮೆಯ ಬಗ್ಗೆ ಬೇರೆ ಹೇಳಬೇಕಾದ ಅವಶ್ಯಕತೆಯಿಲ್ಲ. ಸಂಸಾರದ ನಿಸ್ಸಾರತೆಯನ್ನು ಕಂಡುಂಡ ಮೇಲೆ ಅವರ ವೈರಾಗ್ಯಶೀಲವಾದ ಮಾನಸಹಂಸವು ಭಕ್ತಿಗಂಗೆ ಯಲ್ಲಿ ಸದಾ ಮೀಯುತ್ತಿತ್ತು. ಮಾನವ ಶರೀರವು ನಶ್ವರ, ದುಃಖದ ಬೀಡು ಎಂಬುದು ಎಷ್ಟು ಸತ್ಯವೋ, ಆ ಶರೀರ ದಿಂದಲೇ ವ್ಯಕ್ತಿಯು ಉದ್ಧಾರ ಹೊಂದಬಲ್ಲನು ಎಂಬ ಮಾತೂ ಅಷ್ಟೇ ಸತ್ಯವಾಗಿದೆ. ಮಾನವಜನ್ಮ ದುರ್ಲಭ ವಾದುದು; ಅದು ಇನ್ನೊಮ್ಮೆ ದೊರೆತೀತೋ ಇಲ್ಲವೋ ಸಂದೇಹ. ಆದ್ದರಿಂದ ಯಮನ ದಾಳಿ ಬರುವ ಮೊದಲೇ ಮನುಷ್ಯ ಶ್ರೀಹರಿಯ ಕೃಪೆಗೆ ಪಾತ್ರನಾಗಬೇಕು. "ಶರೀರ ಮಾದ್ಯಂ ಖಲು ಧರ್ಮಸಾಧನಂ" ಎಂಬ ಆರ್ಯೋಕ್ತಿಯ ಸತ್ಯವು ಅವರ ಅನೇಕ ಸುಂದರ ಹಾಡುಗಳಲ್ಲಿ ಅಭಿವ್ಯಕ್ತವಾಗಿದೆ. "ಮನುಜಶರೀರವಿದೇನು ಸುಖಾ?" ಎಂದು ಕೇಳಿದ ಅವರೇ ಮಾನವಜನ್ಮ ದೊಡ್ಡದು" ಎಂದಿದ್ದಾರೆ. ಏಕೆ ? ಇದೊಂದು ದೊಡ್ಡ ಸಾಧನ.

ಶ್ರೀ ಪುರಂದರರ ಹಾಡುಗಳಲ್ಲಿ ಅವರ ಭಕ್ತಿಭಾವವು ಹೇಗೆ ಆರ್ತಭಕ್ತಿಯಿಂದ ಸಿದ್ಧಭಕ್ತಿಯ ವರೆಗೆ ಬೆಳೆಯುತ್ತ ಹೋಯಿತೆಂಬುದರ ಸುಂದರ ಚಿತ್ರವು ನೋಡಲು ದೊರೆಯುತ್ತದೆ. ಇಂಥ ಹಾಡುಗಳಲ್ಲಿಯ ಕಲ್ಪನೆ, ನಾದಮಾಧುರ್ಯ, ಸಂಗೀತಗಳ ಜೊತೆಗೆ ಅವರ ವ್ಯಕ್ತಿತ್ವದ ಕಾಂತಿಯೂ ಕೂಡಿಕೊಂಡು ಓದುವವರ ಮನಸ್ಸನ್ನು ಆಕರ್ಷಿಸುತ್ತವೆ. "ನಾ ನಿನ್ನೊಳನ್ಯ ಬೇಡುವುದಿಲ್ಲ। ಎನ್ನ ಹೃದಯಕಮಲದೊಳು ನಿಂದಿರು ಹರಿಯೇ।" ಎಂದು ಅವರು ಅನನ್ಯ ಭಕ್ತಿಯಿಂದ ಬೇಡಿಕೊಂಡರು. "ಇನ್ನು ದಯಬಾರದೆ, ದಾಸನ ಮೇಲೆ ಇನ್ನೂ ದಯಬಾರದೆ ?" ಎಂದು ಅಲ್ಪರಿದರು.

"ಸಕಲ ಗ್ರಹಬಲ ನೀನೆ ಸರಸಿಜಾಕ್ಷ।
ರವಿ ಚಂದ್ರ ಬುಧ ನೀನೆ ರಾಹು ಕೇತುವು ನೀನೆ।
ಕವಿ ಗುರು ಶನಿಯು ಮಂಗಳನು ನೀನು॥"

ಎಂದು ಶ್ರೀಹರಿಯೇ ಸರ್ವಸ್ವವೆಂದು ತುಂಬಿದೆದೆಯಿಂದಬಣ್ಣಿಸಿದರು. ಪರಮಾತ್ಮನು ಹತ್ತು ಅವತಾರಗಳನ್ನು ತಾಳಿ ಸೃಷ್ಟಿಯನ್ನು ರಕ್ಷಿಸಲಿಲ್ಲವೆ ? ಮತ್ಸ್ಯ, ಕೂರ್ಮ, ವರಾಹಾದಿ ದಶಾವತಾರಗಳಿಂದ ಅವನೇ ಭಕ್ತರನ್ನು ಸಲಹಲಿಲ್ಲವೆ ? ಕರಿರಾಜ, ದ್ರೌಪದಿ ಮೊದಲಾದ ಭಕ್ತಶ್ರೇಷ್ಠರನ್ನು ಅವರಿಷ್ಟಲ್ಲಿಗೇ ಬಂದು ಪರಮಾತ್ಮನು ಸಂರಕ್ಷಿಸಲಿಲ್ಲವೇ ? ಆದ್ದರಿಂದ ಭಕ್ತನಿಗೆ ಭಕ್ತಿಯ ಜೊತೆಗೆ ತಾಳ್ಮೆಯೂ ಬೇಕು.

"ಹರಿ ನಿನ್ನೊಲುಮೆಯು ಆಗುವ ತನಕ।
ಅರಿತು ಸುಮ್ಮನಿರುವುದು ಲೇಸು॥"

ಶ್ರೀ ಪುರಂದರರು ಎಷ್ಟೋ ವರ್ಷಗಳ ವರೆಗೆ ತೀರ್ಥ-ಕ್ಷೇತ್ರಗಳನ್ನು ಸಂಚರಿಸುತ್ತ ಶ್ರೀಹರಿಯನ್ನು ಸದಾ ನೆನೆಯುತ್ತಿದ್ದರು; ಅವರ ಹಾಡುಗಳಲ್ಲಿ ಅನೇಕ ಕ್ಷೇತ್ರಗಳ ವರ್ಣನೆ ಬರುತ್ತದೆ. ಈ ಕಾಲದಲ್ಲಿ ಅವರು ತಮ್ಮ ಮನಸ್ಸಿಗೆ ಅನೇಕ ರೀತಿಯಿಂದ ಬುದ್ಧಿ ಹೇಳಿದರು; ತಮ್ಮ ಭಕ್ತಿ ಸಾಲದೆಂದು ದುಃಖಿಸಿದರು; ಹರಿದಾಸರ ಸಂಗ ದೊರಕಿತೆಂದು ಹರ್ಷಿಸಿದರು; ಅಸಂಗ್ರಹ ವ್ರತವನ್ನು ಕೈಕೊಂಡು ಮಧುಕರ ವೃತ್ತಿಯನ್ನು ಆಶ್ರಯಿಸಿದರು. ತಮ್ಮ ದೋಷ, ಕೊರತೆ-ಗಳನ್ನು ವರ್ಣಿಸುವ ಹಾಡುಗಳಲ್ಲಿ: "ಬಿನ್ನಹಕೆ ಬಾಯಿಲ್ಲವಯ್ಯಾ। ಅನಂತ ಅಪರಾಧ ಎನ್ನಲ್ಲಿ ಇರಲಾಗಿ ॥" ಎಂಬ ಹಾಡು ಪ್ರಸಿದ್ಧವಾಗಿದೆ.

"ನಂಬಿ ಕೆಟ್ಟವರಿಲ್ಲವೋ ।
ರಂಗಯ್ಯನ ನಂಬದೆ ಕೆಟ್ಟರೆ ಕೆಡಲಿ ॥"

ಎಂಬ ಭರವಸೆಯನ್ನು ವ್ಯಕ್ತಪಡಿಸಿದರು.

ಅವರು ತಮ್ಮ ಎಷ್ಟೋ ಹಾಡುಗಳಲ್ಲಿ ತಮ್ಮ ಮನಸ್ಸಿಗೆ ಬುದ್ಧಿಯನ್ನು ಹೇಳಿದ್ದಾರೆ; ತಮ್ಮ ಭಕ್ತಿ ಸಾಲದೆಂದು ಮಿಡುಕಿದ್ದಾರೆ.

"ಕಾಲ ಕಳೆದೆನಲ್ಲಾ । ಜ್ಞಾನ ಬರಲಿಲ್ಲವಲ್ಲಾ ॥
ಕಾಲನವರು ಕರೆಯಬಂದರೆ ಏನು ಹೇಳಲಿ ಸೊಲ್ಲ ?"

"ಎಚ್ಚರಿಕೆ ಎಚ್ಚರಿಕೆ ಮನವೆ ।
ಅಚ್ಯುತನ ಪಾದಾರವಿಂದದ ಧ್ಯಾನದಲಿ ॥"

ಇನ್ನೊಂದೆಡೆಗೆ—

" ಏಕೆ ಚಿಂತಿಸುತಿದ್ದಿ ಕೋತಿ ಮನವೆ ।
ಲೋಕನಾಥನ ನೆನೆದು ಸುಖಿಯಾಗು ಮನವೆ ॥

ಹುಟ್ಟುವಾಗ ಆಪತ್ತಿಗಾರು ಚಿಂತಿಸಿದವರು ।
ಕಟ್ಟಕಡೆಯಲ್ಲಿ ಲಯಕೆ ಯಾರ ಚಿಂತೆ ? "

ಕಾಲ ಸರಿದಂತೆ ಪುರಂದರರ ಭಕ್ತಿಯು ಅಭಿವೃದ್ಧಿ-ಯನ್ನು ಹೊಂದಿತು. ಅವರು ಭಕ್ತಿಪರವಶರಾದರು. ಅವರೇ ಹೇಳಿದಂತೆ "ಹುಚ್ಚು ಹಿಡಿಯಿತು ಎನಗೆ । ಅಚ್ಯುತನ ಧ್ಯಾನವೆಂಬೊ । ಅಚ್ಚುಮೆಚ್ಚು ತಲೆಗೇರಿ । " ಇನ್ನೊಂದೆಡೆಗೆ- "ಹರಿ ನೀನೆ ಗತಿಯೆಂದು ನೆರೆನಂಬಿದವರನು । ಮರೆತಿರುವದು ನ್ಯಾಯವೇ ? " ಎಂದು ಪ್ರಶ್ನಿಸಿದರು. "ತಾರಿಸೋ । ಶ್ರೀ ಹರಿ ನಮ್ಮ ತಾರಿಸೋ ॥ " ಎಂದು ಬಿನ್ನವಿಸಿದರು. ಮತ್ತೊಂದು ಹಾಡಿನಲ್ಲಿ " ಎಲ್ಲಿರುವನೋ ರಂಗನೆಂಬ ಸಂಶಯ ಬೇಡ । ಎಲ್ಲಿ ಭಕ್ತರು ಕರೆದರಲ್ಲೆ ಒದಗುವನು ॥ " ಎಂಬ ನಂಬಿಗೆಯನ್ನು ವ್ಯಕ್ತಪಡಿಸಿದರು. " ಯಾರು ಬಿಟ್ಟರು ನೀ ಕೈಯ ಬಿಡೆ " ಎಂಬ ಭರವಸೆಯನ್ನು ವ್ಯಕ್ತಪಡಿಸಿದರು; ಇನ್ನೊಂದೆಡೆಗೆ " ನಾನಿನ್ನ ಧ್ಯಾನದೊಳಿರಲು । ಮಿಕ್ಕ ಹೀನ ಮಾನವರೇನು ಮಾಡಬಲ್ಲರೋ ರಂಗ ॥ " ಎಂಬ ನಿರ್ಭೀತಿ-ಯನ್ನು ವ್ಯಕ್ತಪಡಿಸಿದರು. ಭಕ್ತನಿಗೆ ಅನ್ಯರಿಂದ ಸಂಕಟ ಬಂದೀತೇ ? ' ಕಿಚ್ಚಿಗೆ ಇರುವೆ ಮುತ್ತುವುದೆ ಪೇಳೆಲೊ ರಂಗ ? "

ಪುರಂದರರ ಹಾಡುಗಳಲ್ಲಿ ಮಧುರಭಾವದ ಭಕ್ತಿಯೂ ಚಿತ್ರಿತವಾಗಿದೆ. ಶ್ರೀಕೃಷ್ಣ ಮತ್ತು ಗೋಪಿಕಾಸ್ತ್ರೀಯರ ಅನೇಕ ಲೀಲೆಗಳು ಅವರ ಹಾಡುಗಳಲ್ಲಿ ವರ್ಣಿತವಾಗಿವೆ. "ಕೊಡೊ ಕೊಡೊ ರಂಗ ಕೊಡೊ । ಮಡದಿಯರುಡುವ ಸೀರೆಗಳ ॥ ಸುರಹೊನ್ನೆ ಮರವೇರಿ ಅಡಗಿದ ನಿಪುಣನೇ । ಆನಂದಭರಿತನೇ ದಯಮಾಡೋ ॥" ಕೆಲವು ಹಾಡುಗಳಲ್ಲಿ ದಾಸರೇ ಗೋಪಿಕಾಸ್ತ್ರೀಯಾಗಿ ಶ್ರೀಕೃಷ್ಣನನ್ನು ಶೃಂಗಾರ ಭಾವದಿಂದ ಆರಾಧಿಸಿದ ವರ್ಣನೆ ಬಂದಿದೆ. ಉದಾಹರಣೆಗೆ – "ತಂಗಾಳಿ ವಶವಲ್ಲವ । ಅಂಗಳದೊಳಗೆ ಬೆಳ । ದಿಂಗಳು ತುಂಬಿತು । ಚಂದನದಿಂದ ಕುಚಂಗಳ ತವಿಸಲು । ಇಂದು-ಕಿರಣ ಬಂದು ಕಂದಿಸಲು ॥ ಮಂದಮಾರುತದಲಿ ನಿಂದಿರಲಾರೆನೆ ॥" ಇತ್ಯಾದಿಯಾಗಿ ಇಂಥ ಹಾಡಿನಲ್ಲಿ ವಿರಹವನ್ನು ಬಣ್ಣಿಸಿದ್ದಾರೆ.

ಪುರಂದರರು ಕೃಷ್ಣನ ಬಾಲಲೀಲೆಗಳನ್ನು ಬಣ್ಣಿಸುತ್ತ ಭಕ್ತಿಯ ವಾತ್ಸಲ್ಯಭಾವವನ್ನೂ ಬಣ್ಣಿಸಿದ್ದಾರೆ. "ಅಮ್ಮ ನಿಮ್ಮ ಮನೆಗಳಲಿ ನಮ್ಮ ರಂಗನ ಕಂಡಿರೇನಮ್ಮ ?" "ಬಾರೆ ಗೋಪಮ್ಮ ನಿಮ್ಮ ಬಾಲಯ್ಯನು ಅಳುತಾನೆ" "ದಾರ ಮಗ ಪೇಳೆಲೆ ಗೋಪಿ । ಒರಳನೆಳೆಯುತ ಅಂಬೆಗಾಲನಿಕ್ಕುತ ಬರುವ" ಇನ್ನೊಂದೆಡೆಗೆ "ಪೋಗದಿರೆಲೋ ರಂಗ ಬಾಗಿಲಿಂದಾಚೆಗೆ ।" ಇಂಥ ಹಾಡುಗಳಲ್ಲಿ ದಾಸರ ವಾತ್ಸಲ್ಯಭಕ್ತಿಯು ಸೂಸಿ ಹರಿದಿದೆ.

ದಾಸರು ಭಕ್ತಿಯೆಂಬ ಸ್ಥಾಯಿಯ ನಾನಾ ಸಂಚಾರಿ ಭಾವಗಳನ್ನು ಅನುಭವಿಸಿ ಕೊನೆಗೆ ಸಾಕ್ಷಾತ್ಕಾರದ ರಸಸಿದ್ಧಿ

ಯನ್ನು ಅನುಭವಿಸಿದರು. ಕೆಲವು ಹಾಡುಗಳಲ್ಲಿ ಈ ಸಿದ್ಧಿ ಮತ್ತು ಧನ್ಯತೆಯ ಆನಂದೋದ್ರೇಕ ಚೆನ್ನಾಗಿ ನಿರೂಪಿತವಾಗಿವೆ. "ಕೃಷ್ಣಮೂರ್ತಿ ಕಣ್ಣಮುಂದೆ ನಿಂತಿದಂತಿದೆ। ಕಷ್ಟಗಳೆಲ್ಲವ ಪರಿಹರಿಸಿ ಮನ। ದಿಷ್ಟಾರ್ಥಗಳನೆಲ್ಲ ಕೊಟ್ಟು ರಕ್ಷಿಸುವಂಥ ॥" ಇನ್ನೊಂದೆಡೆಗೆ–"ಕಂಡೆ ನಾ ಗೋವಿಂದನ। ಪುಂಡರೀಕಾಕ್ಷ ಪಾಂಡವಪಕ್ಷ ಕೃಷ್ಣನ ॥" ಮತ್ತೊಂದೆಡೆಗೆ "ಕಣ್ಣಾರೆ ಕಂಡೆನಚ್ಯುತನ। ಕಂಡೆ ಪುಣ್ಯಕೋಟಿ ಕರಿರಾಜ ವರದನ ॥" ಎಂದಿದ್ದಾರೆ. ಧನ್ಯತೆಯನ್ನು ವ್ಯಕ್ತಪಡಿಸುವ ಹಾಡುಗಳಲ್ಲಿ – "ಬದುಕಿದೆನು ಬದುಕಿದೆನು ಭವವೆನಗೆ ಹಿಂಗಿತು। ಪದುಮನಾಭನ ಪಾದದೊಲುಮೆ ಎನಗಾಯಿತು ॥ ಮುಕ್ತರಾದರು ಎನ್ನ ನೂರೊಂದು ಕುಲದವರು। ಮುಕ್ತಿಮಾರ್ಗಕೆ ಯೋಗ್ಯ ನಾನಾದೆನು ॥" ಎಂಬುದು ಸ್ಪಷ್ಟವಾಗಿ ದಾಸರ ಸಿದ್ಧಿಯನ್ನು ಬಣ್ಣಿಸುತ್ತದೆ. ಹೀಗೆ ಪುರಂದರರು ಪರಮ ವೈರಾಗ್ಯಶಾಲಿಗಳಾಗಿ, ಭಕ್ತಶಿರೋಮಣಿಗಳಾಗಿ ಇಲ್ಲಿಯೇ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆದು ಧನ್ಯರಾದರು.

---

# ೨. ಶ್ರೀ ಪುರಂದರದಾಸರ ಸಮಾಜದರ್ಶನ ಮತ್ತು ಬೋಧೆ

ಹೀಗೆ ಧನ್ಯತೆಯನ್ನು ಪಡೆದ ಪುರಂದರರು ಸಮಾಜದಲ್ಲಿಯ ಸಾಮಾನ್ಯರು ನಶ್ವರವಾದ ಐಹಿಕ ಭೋಗಗಳಲ್ಲಿಯೇ ಮುಳುಗಿ, ಶಾಶ್ವತವಾದದ್ದನ್ನು ಮರೆಯುವುದನ್ನು ಕಂಡು ಮರುಗಿದರು. ಉದಾರವಾದ ಅವರ ಮನಸ್ಸು ಜನರನ್ನು ತಿದ್ದಿ ಉದ್ಧಾರ ಮಾಡಲು ಬಯಸಿತು. ಜಗತ್ತಿನ ಎಲ್ಲ ದಾರ್ಶನಿಕರು ತಮ್ಮ ದರ್ಶನಸಿದ್ಧಿಯನ್ನು ಪಡೆದಮೇಲೆ ಸ್ವಾರ್ಥಿಗಳಾಗಿ ತಮ್ಮಷ್ಟಕ್ಕೇ ಆ ಸಿದ್ಧಿಯ ಆನಂದವನ್ನು ಹೊಂದದೆ ಅನ್ಯರಿಗೆ ಆ ಸಿದ್ಧಿ ಮತ್ತು ಆನಂದಗಳು ದೊರೆಯಲಿ ಎಂಬ ಉದಾತ್ತ ಧ್ಯೇಯದಿಂದ ಪ್ರವೃತ್ತರಾಗಿದ್ದಾರೆ. ಓರ್ವ ಮಹಾಪುರುಷನು ಜೀವಿಸಿರುವಾಗ ಅವನ ದರ್ಶನವೂ ಸಜೀವವಾಗಿದ್ದು ಜನತೆಯನ್ನು ಸನ್ಮಾರ್ಗಕ್ಕೆ ಹಚ್ಚುತ್ತದೆ. ಅವನು ಮತ್ತು ಅವನ ಶಿಷ್ಯರು ಆಗಿಹೋದ ಬಹುಕಾಲದ ನಂತರ ಆ ಸಜೀವದರ್ಶನವು ಕೇವಲ ಒಂದು ಮತವಾಗಿ ಪರಿಣಮಿಸಿ ಅದರಲ್ಲಿಯ ಬಾಹ್ಯ ಹಾಗೂ ಶುಷ್ಕವಾದ ಆಚರಣೆಗಳೇ ಪ್ರಾಧಾನ್ಯತೆಯನ್ನು ಪಡೆಯುತ್ತವೆ. ಸುದೈವದಿಂದ

ಪುರಂದರರು ಕಂಡ ದರ್ಶನ ಹಾಗೆ ಆಗಿಲ್ಲ. ಅವರ ಹಾಡುಗಳಲ್ಲಿ ಅವರು ಕಂಡ ಕಾಣ್ಕೆ ಇನ್ನೂ ಸಜೀವವಾಗಿದೆ. ಕನ್ನಡ ನುಡಿ ಇರುವವರೆಗೆ ಅವರ ಹಾಡುಗಳು ಅವರ ಅಮರ ಸಂದೇಶವನ್ನು ಬೀರುತ್ತವೆಂಬುದರಲ್ಲಿ ಸಂಶಯವಿಲ್ಲ.

ತಮ್ಮ ಸುತ್ತುಮುತ್ತಲಿನ ಸಮಾಜವನ್ನು ಪುರಂದರರು ಸೂಕ್ಷ್ಮವಾಗಿ ನಿರೀಕ್ಷಿಸಿದರು. ಅದರಲ್ಲಿ ಅವರು ಕಂಡ ಮೊದಲನೆಯ ದೊಡ್ಡ ದೋಷವೆಂದರೆ ಡಾಂಭಿಕತೆ. ಭಾರತೀಯ ಸಮಾಜದಲ್ಲಿ ಧರ್ಮಕ್ಕೆ ಯಾವಾಗಲೂ ಪ್ರಥಮ ಸ್ಥಾನವಿದೆ. ಆದ್ದರಿಂದ ಸಮಾಜದಲ್ಲಿಯ ವ್ಯಕ್ತಿಗಳು, ಅದರಲ್ಲಿಯೂ ಪ್ರತಿಷ್ಠಿತರು, ಧಾರ್ಮಿಕರಾಗಲು ಬಯಸಿದರು. ಆದರೆ ಐಹಿಕ ಜೀವನದ ಸೆಳೆತ ಅವರಲ್ಲಿ ಬಲವಾಗಿದ್ದರಿಂದ ನಿಜವಾದ ಧಾರ್ಮಿಕತೆ ಅವರಲ್ಲಿ ಉದಯವಾಗಲಿಲ್ಲ. ಹೀಗಾಗಿ ಅಂತರ್ಯದಲ್ಲಿಲ್ಲದಿದ್ದರೂ ಬಾಹ್ಯ ಜೀವನದಲ್ಲಿ ಧಾರ್ಮಿಕನಾಗಿ ಕಾಣಬೇಕೆಂಬ ಹವ್ಯಾಸ ಮೊದಲಾಯಿತು. ಇದೇ ಡಾಂಭಿಕತೆಯ ಮೂಲವೆನ್ನಬಹುದು. ಹರಿದಾಸರು ಇಂಥ ಡಾಂಭಿಕತೆಯನ್ನು ಕಟುವಾಗಿ ಟೀಕಿಸಿದ್ದಾರೆ. ಒಬ್ಬ ಮನುಷ್ಯನು ನಿಜವಾಗಿ ಧಾರ್ಮಿಕನಾಗಿರದಿದ್ದರೂ ಅಡ್ಡಿಯಿಲ್ಲ; ಆದರೆ ಅವನು ಡಾಂಭಿಕನಾಗಿರಕೂಡದು. ಇದರಿಂದ ಇಹ–ಪರಗಳೆರಡೂ ಸಾಧಿಸವು. ಇಂಥವರ ವೈರಾಗ್ಯವು "ಉದರವೈರಾಗ್ಯ"ವಲ್ಲದೆ ಬೇರೆಯಲ್ಲ. ಅವರ ಸುಪ್ರಸಿದ್ಧ ಹಾಡಿನಲ್ಲಿ ಹೇಳಿದಂತೆ–

ಉದರ ವೈರಾಗ್ಯವಿದು ॥
ನಮ್ಮ ಪದುಮನಾಭನಲ್ಲಿ ಲೇಶ ಭಕುತಿಯಿಲ್ಲ ॥

ಉದಯಕಾಲದಲೆದ್ದು ಗಡಗಡ ನಡುಗುತ।
ನದಿಯಲಿ ಮಿಂದೆನೆಂದು ಹಿಗ್ಗುತಲಿ ॥
ಮದ ಮತ್ಸರ ಕ್ರೋಧ ಒಳಗೆ ತುಂಬಿಟ್ಟುಕೊಂಡು।
ಬದಿಯಲ್ಲಿದ್ದವರಿಗಾಶ್ಚರ್ಯವ ತೋರುವುದು"

ಇಂಥ ಸ್ನಾನ, ಪೂಜೆ, ಮಂತ್ರ, ಜಪತಪಾದಿಗಳು "ನಾಟಕ ಸ್ತ್ರೀಯಂತೆ" ಬಯಲ ಡಂಭವನ್ನು ತೋರುತ್ತವೆ. ಇದನ್ನು ಬಿಟ್ಟು ನಿಜವಾದ ವೈರಾಗ್ಯವೆಂದರೆ ಅವರೇ ಹೇಳಿದಂತೆ– "ನಾನು ಎಂಬುದು ಬಿಟ್ಟು ಜ್ಞಾನಿಗಳೊಡನಾಡಿ। ಏನಾದರೂ ಹರಿಪ್ರೇರಣೆಯೆಂದು ॥ ಧ್ಯಾನಿಸಿ ಮೌನದಿ ಪುರಂದರ ವಿಠಲನ ॥" ಕಾಣಬೇಕು.

ಐಹಿಕ ಭೋಗದ ಆಶೆ ತೀರದೆ ತೋರಿಕೆಗಾಗಿ ಭಕ್ತಿಯನ್ನು ಮಾಡುವವರ ವ್ಯಂಗ್ಯ ಚಿತ್ರಗಳು ಪುರಂದರರ ಹಾಡುಗಳಲ್ಲಿ ನೋಡಲು ದೊರೆಯುತ್ತವೆ. ಇಂಥ ಭಕ್ತರಿಗೆ "ಗಂಗೆ ಮುಳುಗುವಾಗ ಚೆಂಬು ಮೇಲಿನ ಚಿಂತೆ। ಸಂಗಡದವರು ಪೋಗುವ ಚಿಂತೆ ॥" ಎಂದು ಮಾರ್ಮಿಕವಾಗಿ ನಿರೂಪಿತವಾಗಿದೆ. ನಿಜವಾದ ಭಕ್ತನು ಇಂಥ ಡಾಂಭಿಕರ ಮಧ್ಯದಲ್ಲಿ ಜೀವಿಸುವದೇ ಕಠಿಣ. ಅವರೇ ಒಂದೆಡೆ ಹೇಳಿದಂತೆ–

"ಮಾತುಗಳಾಡದೆ ಮೌನದಿಂದಿದ್ದರೆ।
ಭೂತ ಬಡೆದವನೆಂದು ಕರೆಯುವರು ॥
ಚಾತುರ್ಯದಿಂದಲಿ ಮಾತುಗಳಾಡಲು।
ಪಿತ್ತೇರಿ ಬಲು ಬಾಯಿಬಡಕನೆಂಬುವರಯ್ಯ ॥"

ಇಂಥ ನರಕದೊಳಗಿನ್ನು ಹುಟ್ಟಿಸದಿರು, ಎಂದು ಪರಮಾತ್ಮನನ್ನು ಬೇಡಿಕೊಂಡಿದ್ದಾರೆ. ಲೋಕದ ಆತ್ಮವಂಚನೆಯನ್ನು ಕಂಡು ಪುರಂದರರು ನಕ್ಕರು. ಅವರೇ ಹೇಳಿದಂತೆ–

"ನಗೆಯು ಬರುತಿದೆ। ಎನಗೆ ನಗೆಯು ಬರುತಿದೆ
ಜಗದೊಳಿರುವ ಮನುಜರೆಲ್ಲ। ಹಗರಣ ಮಾಡುವುದ ಕಂಡು ॥
ಪರರ ವನಿತೆಯೊಲುಮೆಗೊಲಿದು। ಹರುಷದಿಂದ ಅವಳ ಬೆರೆದು
ಹರಿಯುವ ನೀರಿನೊಳಗೆ ಮುಳುಗಿ। ಬೆರಳ ಎಣಿಸುತಿಹರ
ಕಂಡು ॥"

ಧರ್ಮದ ಬಾಹ್ಯ ಆಚರಣೆಗಿಂತ ಅಂತಃಶುದ್ಧಿ, ಸದಾಚಾರಗಳು ಮಹತ್ವದ್ದಾಗಿವೆ-ಎಂದು ಅವರು ಸ್ಪಷ್ಟೀಕರಿಸಿದ್ದಾರೆ. "ತನುವ ನೀರೊಳಗದ್ದಿ ಫಲವೇನು। ಮನದಲ್ಲಿ ದೃಢಭಕ್ತಿ ಇಲ್ಲದ ಮನುಜನು ॥ ದಾನಧರ್ಮಗಳನು ಮಾಡುವುದೆ ಸ್ನಾನ। ಜ್ಞಾನ ತತ್ವಂಗಳ ತಿಳಿವುದೆ ಸ್ನಾನ ॥'' ಮತ್ತೊಂದೆಡೆಗೆ "ಮನವ ಶೋಧಿಸಬೇಕೋ ನಿತ್ಯ" ಎಂದು ಬೋಧಿಸಿದ್ದಾರೆ.

ಸಾಮಾನ್ಯರ ಜಿಪುಣತೆಯನ್ನು ಅವರು ಬಿಡದೆ ಖಂಡಿಸಿದ್ದಾರೆ. ಇದು ಬಹುಶಃ ಅವರ ಜೀವನದಲ್ಲಿಯ ದೊಡ್ಡ ಮಾರ್ಪಾಟಾದದ್ದರಿಂದ ಪರಿಣಾಮಕಾರಿಯಾಗಿ ವ್ಯಕ್ತವಾಗಿದೆ. "ಹರಿ ಕೊಟ್ಟ ಕಾಲಕ್ಕೆ ಉಣಲಿಲ್ಲ। ಹರಿ ಕೊಡದ ಕಾಲಕ್ಕೆ ಬಾಯಿ ಬಿಡುವ್ಯಲ್ಲವೋ ಪ್ರಾಣಿ ॥ ಹತ್ತು ಸಾವಿರ ಹೊನ್ನು ತಿಪ್ಪೆಯಲಿ ಹೂಳಿಟ್ಟು। ಮತ್ತೆ ಉಪ್ಪಿಲ್ಲದೆ ಉಂಡ್ಯೆಲ್ಲೋ ಪ್ರಾಣಿ ॥ ಹುಗ್ಗಿಯು ತುಪ್ಪವು ಮನೆಯೊಳಗಿರಲಿಕ್ಕೆ। ಗುಗ್ಗರಿಯನ್ನವ ತಿಂದ್ಯೆಲ್ಲೋ ಪ್ರಾಣಿ ॥" ಶ್ರೀಮಂತನಾದವನು ತ್ಯಾಗಿಯಾಗಿರ-

ದಿದ್ದರೂ ತನ್ನ ಸಿರಿವಂತಿಕೆಯು ಪರಮಾತ್ಮನ ಕೃಪೆಯಿಂದು ಬಂದುದು ಎಂದು ತಿಳಿದು ಅದನ್ನು ಭೋಗಿಸಬೇಕು ಎಂಬ ಮಾತು ಮಹತ್ವದ್ದಾಗಿದೆ. ದಾಸರು ಹಾಡುತ್ತ ಭಿಕ್ಷೆಗೆಂದು ಮನೆಮನೆಗೆ ಹೋದರೆ ಕೆಲವರು ಭಿಕ್ಷೆಹಾಕಿದ್ದುಂಟು, ಇನ್ನು ಕೆಲವರು ಬಾಗಿಲು ಹಾಕಿದ್ದುಂಟು. ಅವರ ಒಂದು ಹಾಡಿನಲ್ಲಿ–

“ ಕದವ ಮುಚ್ಚಿದಳಿದಕೋ ।
ಗಯ್ಯಾಳಿ ಮೂಳಿ ॥
ಕದವ ಮುಚ್ಚಿದಳಿದಕೋ ಚಿಲುಕ ಅಲ್ಲಾಡುತಿದೆ ॥
ಒದಗಿದ್ದ ಪಾಪವು ಹೋದೀತು ಹೊರಗೆಂದು ।
ಭಾರತ ರಾಮಾಯಣ ಪಂಚರಾತ್ರಾಗಮ ।
ಸಾರತತ್ವದ ಬಿಂದು ಸೇರೀತು ಒಳಗೆಂದು ॥
ಅಂದುಗೆ ಕಿರುಗೆಜ್ಜೆ ಮುಂಗಾಲಿಲಳವೊಟ್ಟು ।
ಧಿಂ ಧಿಮಿ ಧಿಮಿಕೆಂದು ಕುಣಿವ ದಾಸರ ಕಂಡು ॥ ”

ಎಂದು ಒಬ್ಬ ಅಜ್ಞ ಸ್ತ್ರೀಯ ಬುದ್ಧಿಹೀನತೆಯನ್ನು ಮಾರ್ಮಿಕವಾಗಿ ಬಣ್ಣಿಸಿದ್ದಾರೆ.

ಎದುರಿನಲ್ಲಿ ಸವಿ ಮಾತನಾಡಿ ಹಿಂದೆ ನಿಂದಿಸುವ ಕುಜನರನ್ನು ಪುರಂದರರು ನಿರ್ದಾಕ್ಷಿಣ್ಯವಾಗಿ ಟೀಕಿಸಿದ್ದಾರೆ. “ ಮುಂದೆ ಭಲಾಯೆಂದು ಹಿಂದಾಡಿಕೊಂಬರ ಸಂಗ ಬೇಡ । ತುದಿನಾಲಗೆ ಬೆಲ್ಲ ಎದೆಕತ್ತರಿಯುವರ ಸಂಗ ಬೇಡ ॥ ” ಈ ಹಾಡಿನಲ್ಲಿ “ ಮಧುತಿಷ್ಠತಿ ಜಿಹ್ವಾಗ್ರೇ ಹೃದಯೇತು ಹಲಾಹಲಂ ” ಎಂಬ ಸಂಸ್ಕೃತ ಉಕ್ತಿಯ ಕನ್ನಡ ಭಾವವು ಸೊಗಸಾಗಿ ಬಂದಿದೆ. ದೇವರನ್ನು ಮೆಚ್ಚಿಸಬಹುದು, ಆದರೆ ಲೋಕವನ್ನು ಮೆಚ್ಚಿಸುವುದು ಕಠಿಣ. ಅವರೇ ಹೇಳಿದಂತೆ—

" ಹರಿಹರಿ ನಿನ್ನನು ಒಲಿಸಲು ಬಹುದು ।
ನರಜನರನೊಲಿಸುವುದು ಬಲು ಕಷ್ಟ ॥
ಸರಿಬಂದಂತೆ ಆಡುವ ಜನರಿಗೆ ।
ಕಡೆತನಕಿರುವುದು ಕಲಿಕಷ್ಟ ॥
ಬಹಳನ್ನವನುಂಡರೆ ಭೂತ ಪ್ರಾಣಿಯಿವನೆಂಬೋರು ।
ಕಮ್ಮುಂಡರೆ ಕಡುಲೋಭಿಯೆಂಬೋರು ॥
ಉಣದಿದ್ದರೆ ರೋಗ್ಯೆಂಬುವರಯ್ಯ ॥ "

ಕೇವಲ ಬಾಹ್ಯಶುಚಿಗೆ ಮಹತ್ವವನ್ನು ಕೊಟ್ಟು ಮಡಿ ಮಾಡುವ ಜನರನ್ನು ದಾಸರು ಖಂಡಿಸಿದ್ದಾರೆ—

" ಮಡಿ ಮಡಿ ಮಡಿಯೆಂದು ಮೂರು ಮಾರು ಹಾರುತಿ ।
ಮಡಿಯೆಲ್ಲಿ ಬಂತೊ ಬಿಕನಾಸಿ ॥
ಚರ್ಮವ ತೊಳೆದರೆ ಕರ್ಮವು ಹೋಗ್ವದೆ ।
ಮರ್ಮವ ತಿಳಿಯದೆ ಬಿಕನಾಸಿ ॥ "

ಎಂದು ಅವರು ಕೇಳಿದ್ದಾರೆ. ಇದೇ ರೀತಿಯಲ್ಲಿ ಹೊಲೆಯ ಯಾರು ? ಎಂಬ ಪ್ರಶ್ನೆಗೆ ಪುರಂದರರು—

" ಹೊಲಗೇರಿಯಲಿ ಹೊಲೆಯ ಹೊಲತಿಲ್ಲ ।
ಸತಿವಶನಾಗಿ ಜನನಿ ಜನಕರಿಗೆ ।
ಅತಿ ನಿಷ್ಠುರ ನುಡಿವವ ಹೊಲೆಯ ॥
ಸುತರ ಪಡೆದು ವಾರ್ಧಿಕ ಮದವೇರಿ ।
ಪತಿದ್ವೇಷ ಮಾಡುವವಳೇ ಹೊಲತಿ ॥
ಒಡೆಯನನ್ನವನುಂಡು ಆವನ ಕೂಡ ।
ಬಡಿದಾಡಿ ರೋಷ ತಾಳ್ವನೆ ಹೊಲೆಯ ॥

ಬಡತನ ಬಂದರೆ ಅಡಿಗಡಿಗೊಮ್ಮೆ ।
ಹೊಡೆದಾಡಿ ಪತಿಯ ಬಯ್ವಳೆ ಹೊಲತಿ ॥"

ಈ ರೀತಿ ವಿವರಿಸಿದ್ದಾರೆ.

ಪುರಂದರರರು ದುರ್ಜನರ ಸ್ವಭಾವವನ್ನು ಯಥಾವತ್ತಾಗಿ ಬಣ್ಣಿಸಿದ್ದಾರೆ. ಅವರು ಕೇವಲ ನಿರುಪಯೋಗಿಯಾಗಿರುವ-ರಲ್ಲದೆ ಸಮಾಜಕ್ಕೆ ಕಂಟಕಪ್ರಾಯರಾಗಿದ್ದಾರೆ. ದುರ್ಜನರು ಜಾಲಿಯ ಮರದಂತೆ–

"ಧರೆಯೊಳು ದುರ್ಜನರು ।
ಜಾಲಿಯ ಮರದಂತೆ ।
ಮೂಲಾಗ್ರ ಪರಿಯಂತ ।
ಮುಳ್ಳು ಕೂಡಿಪ್ಪಂತ ॥
ಬಿಸಿಲಲಿ ಬಳಲಿ ಬಂದವರಿಗೆ ನೆರಳಿಲ್ಲ ।
ಹಸಿದು ಬಂದವರಿಗೆ ಹಣ್ಣೊಯಿಲ್ಲ ॥
ಕುಸುಮ ವಾಸನೆಯಿಲ್ಲ ಕೂಡಲು ಸ್ಥಳವಿಲ್ಲ ।
ರಸದಲ್ಲಿ ಸ್ವಾದವು ವಿಷದಂತೆ ಇರುತಿಹ ॥"

ಹೀಗೆ ದುರ್ಜನಸ್ವಭಾವವನ್ನು ತಿದ್ದುವುದು ಕಷ್ಟ ಎಂಬ ಮಾತನ್ನು ಜಾಲಿಯ ಮರದ ಉದಾಹರಣೆಯಿಂದ ಮಾರ್ಮಿಕ-ವಾಗಿ ವಿವರಿಸಿದ್ದಾರೆ.

ಸಮಾಜದಲ್ಲಿಯ ಗೌರವವು ವ್ಯಕ್ತಿಯ ಸಿರಿವಂತಿಕೆ-ಯನ್ನು ಅವಲಂಬಿಸಿರುತ್ತದೆ. ದಾಸರು ಇದನ್ನು ಖಂಡಿಸುತ್ತ

"ಬಡವಬಲ್ಲಿದನೆಂಬ ನುಡಿ ಆತ್ಮಗುಂಟೆ ?" ಎಂದು ಪ್ರಶ್ನಿಸಿ-ದ್ದಾರೆ.

ಹೊನ್ನು ಹಣವುಳ್ಳವರ ಬನ್ನಿ ಕುಳ್ಳಿರಿ ಎಂದು ।
ಮನ್ನಿಸುವರಧಿಕ ಸಂಭ್ರಮದಿಂದಲಿ ॥
ಉನ್ನತೈಶ್ವರ್ಯವಿಲ್ಲದ ಬಡವ ತಾ ಬರಲು ।
ಕುನ್ನಿ ಹೋಗೆನುತ ಅಟ್ಟುವರ್ ಮೂಢತನದಿ ॥"

ಸಮಾಜದಲ್ಲಿಯ ಈ ಮೇಲುಕೀಳನ್ನು ಅಲ್ಲಗಳೆದು ದಾಸರು "ಬಡವನಾದರೆ ಆತ್ಮ ಬಡವನೇ ?" ಎಂದು ಕೇಳಿದ್ದಾರೆ. ನಾನೂರು ವರುಷಗಳ ಹಿಂದೆಯೇ ಪುರಂದರದಾಸರು ಸಮಾಜದಲ್ಲಿಯ ವೈಷಮ್ಯವನ್ನು ಖಂಡಿಸಿದ್ದರೆಂಬುದು ನಿಜವಾಗಿಯೂ ಮನನೀಯವಾದ ಅಂಶವಾಗಿದೆ.

ಜಗತ್ತನ್ನು ಕಂಡು ದಾಸರಿಗೆ "ಉತ್ತಮರಿಗಿಲ್ಲವೀ ಕಾಲ" ಎನಿಸಿದೆ. ಎಷ್ಟು ಉಪದೇಶ ಮಾಡಿದರೂ ಕೆಲವರಲ್ಲಿ ಧರ್ಮ ಬುದ್ಧಿಯು ಸ್ಥಾಯಿಯಾಗಿ ನಿಲ್ಲದುದನ್ನು ಕಂಡು ದಾಸರಿಗೆ ಹೀಗೆನಿಸಿರಬೇಕು.

"ಧರ್ಮಕೆ ಕೈ ಬಾರದೀಕಾಲ ॥
ಪಾಪ ಕರ್ಮಕೆ ಮನಸೋಲೋದೀಕಲಿಕಾಲ ।
ದಂಡದ್ರೋಹಕುಂಟು ।
ಪುಂಡು ಪೋಕರಿಗುಂಟು ॥
ಹೆಂಡತಿ ಮಕ್ಕಳಿಗಿಲ್ಲೀಕಾಲ ।
ಮತ್ತೆ ಸುಳ್ಳರಿಗುಂಟು ॥
ನಿತ್ಯಹಾದರಕುಂಟು ।

ಉತ್ತಮರಿಗಿಲ್ಲವೀಕಾಲ ॥
ಹುಸಿದಿಟವಾಯಿತು ।
ರಸ ಕಸವಾಯಿತು ॥"

ಇದೇ ಬಗೆಯ ವ್ಯಥೆ ಇನ್ನೊಂದು ಹಾಡಿನಲ್ಲಿಯೂ ವ್ಯಕ್ತವಾಗಿದೆ.

"ಇಲ್ಲಿ ನಮ್ಮ ಶಾಸ್ತ್ರ ಮಾರುವುದಿಲ್ಲ ।
ಸುಮ್ಮನಿದ್ದರೆ ದಾರು ಕೇಳುವರಿಲ್ಲ ।
ಏಡಿ ಕಡಗವಿಟ್ಟು ಫಲವೇನಿಲ್ಲ ।
ಬೇಡ ತಾ ಮುತ್ತಿನ ಬೆಲೆಯೇನು ಬಲ್ಲ ॥
ಕಾಡ್ಹಳ್ಳಿ ಗೌಡ ತಾನರಸಾಗಲಿಲ್ಲ ।
ವೇದ ಶಾಸ್ತ್ರಕೆ ಮೂಢ ತಲೆದೂಗಲಿಲ್ಲ ॥"

ಪುರಂದರರು ಹೀಗೆ ಸಮಾಜದ ದೋಷಗಳನ್ನು ಎತ್ತಿ ತೋರಿಸುವದರ ಜೊತೆಗೆ ಜನಸಾಮಾನ್ಯರಿಗೆ ವಿಧಾಯಕವಾದ ಬೋಧನೆಯನ್ನಿತ್ತಿದ್ದಾರೆ. ಅವರು ಅನೇಕ ಹಾಡುಗಳಲ್ಲಿ ಜನರನ್ನು ಕೂಗಿ ಕರೆದು ಕಳಕಳಿಯಿಂದ ಅವರಿಗೆ ನೇರವಾದ ಸದುಪದೇಶವನ್ನು ನೀಡಿದ್ದಾರೆ. ದೇಹಾಭಿಮಾನ-ವನ್ನು ಬಿಡು ಎಂದು ಹೇಳುವಾಗ—"ಹಲವು ವ್ಯಾಧಿಯ ಬೀಡು ಪಂಚಭೂತದ ನಾಡು । ಬಲುಹು ದೇಹವ ನೆಚ್ಚಿ ಕೆಡ-ಬೇಡ ಮನುಜ ॥" ಎಂದು ಉಪದೇಶಿಸಿದ್ದಾರೆ. ನಾವು ನಂಬಬೇಕಾದದ್ದು ಪರಮಾತ್ಮನೊಬ್ಬನನ್ನು —"ಹರಿಯ ನೆನೆಯಿರೊ । ನಮ್ಮ ಹರಿಯ ನೆನೆಯಿರೊ ॥ ಬರಿಯ

ಮಾತನಾಡಿ ಬಾಯ। ಬರಡು-ಮಾಡಿ ಕೆಡಲು ಬೇಡಿ ॥" ಇನ್ನೊಂದೆಡೆಗೆ — 'ಕೃಷ್ಣನಾಮ ನೆನೆದು ಧನ್ಯನಾಗೋ " ಎಂದಿದ್ದಾರೆ.

ಹರಿಭಕ್ತಿಸುಧೆಯು ಮನಸ್ಸಿನಲ್ಲಿ ಸದಾ ನೆಲೆಸಬೇಕಾದರೆ ಮನಸ್ಸು ನಿರ್ಮಲವಾಗಿರುವುದು ಅತ್ಯವಶ್ಯವಾಗಿದೆ. ಆದಕಾರಣ ದಾಸರು ಕಾಮಕ್ರೋಧಾದಿ ಷಡ್ರಿಪುಗಳನ್ನು ಜಯಿಸುವ ಮಾತನ್ನು ಒತ್ತಿಹೇಳಿದ್ದಾರೆ. ಒಂದೆಡೆಗೆ— "ಹೆಮ್ಮೆಯಾಡಲು ಬೇಡಿ। ಹೆಮ್ಮೆ ನೀಡಾಡುವುದು ॥ ಹೆಮ್ಮೆಯಿಂದಲಿ ನೀವು ಕೆಡಬೇಡಿರಯ್ಯ ॥" ಎಂದು ಬೋಧಿಸಿದ್ದಾರೆ. ಈ ಹೆಮ್ಮೆಯಿಂದಲೆ ರಾವಣ-ದುರ್ಯೋಧನ ಮೊದಲಾದವರು ಅಧೋಗತಿಗಿಳಿದರು. "ವಿಷವೆಂದು ಕಾಮಕ್ರೋಧಗಳೆಲ್ಲನೀಡಾಡು। ಹಣ ಹೊನ್ನು ಪರಹೆಣ್ಣು ಹೆಂಚೆಂದು ನೋಡು ॥" ಎಂದಿದ್ದಾರೆ.

ಪುರಂದರರು ತಮ್ಮ ಒಂದು ಸುಂದರವಾದ ಹಾಡಿನಲ್ಲಿ ಹೃದಯವೆಂಬ ಹೊಲದಲ್ಲಿ ನಾರಾಯಣ ನಾಮವೆಂಬ ಬೀಜವನ್ನು ಬಿತ್ತಿ ಸಿದ್ಧಿಯ ಫಲವನ್ನು ಪಡೆಯಿರೆಂದು ಉಪದೇಶಿಸಿದ್ದಾರೆ—

ಹೃದಯ ಹೊಲವಮಾಡಿ ಮನವ ನೇಗಿಲಮಾಡಿ।
ಶ್ವಾಸೋಚ್ಛ್ವಾಸ ಎರಡೆತ್ತುಮಾಡಿ ॥
ಜ್ಞಾನವೆಂಬ ಹಗ್ಗ ಕಣ್ಣಿಯಮಾಡಿ।
ನಿರ್ಮಮವೆಂಬ ಗುಂಟೆಲಿ ಹರಗಿರಯ್ಯ।
ಪಂಚೇಂದ್ರಿಯವೆಂಬ ಮಂಚಿಕೆಯನೆ ಹಾಕಿ ॥

ಚಂಚಲವೆಂಬ ಹಕ್ಕಿಯ ಹೊಡೆಯಿರಯ್ಯ ॥
ಉದಯಾಸ್ತಮಾನವೆಂಬ ಎರಡು ಕೊಳಗದಲಿ ।
ಆಯುಷ್ಯವೆಂಬ ರಾಶಿ ಅಳೆಯುತಿರೆ ॥
ಸ್ವಾಮಿ ಶ್ರೀ ಪುರಂದರ ವಿಠ್ಠಲನ ನೆನೆದರೆ ।
ಪಾಪ ರಾಶಿಯ ಪರಿಹರಿಸುವನಯ್ಯ ॥"

ಈ ಕೀರ್ತನೆಯಲ್ಲಿ ಒಂದು ಸುಂದರವಾದ ಭವ್ಯ ರೂಪಕದ ಮೂಲಕ ದಾಸರು ಉಪದೇಶವನ್ನು ಪರಿಣಾಮಕಾರಿಯಾಗಿ ಮಾಡಿದ್ದಾರೆ. ಇಲ್ಲಿ ಪುರಂದರರ ಕಾವ್ಯಶಕ್ತಿಯು ಅರಿವು ನಮಗಾಗುತ್ತದೆ.

ಇನ್ನೊಂದು ಕೀರ್ತನೆಯಲ್ಲಿ ಉಪದೇಶವನ್ನು ಚಮತ್ಕಾರದ ರೀತಿಯಲ್ಲಿ ಮಾಡಿದ್ದಾರೆ.

"ಕಾಗದ ಬಂದಿದೆ । ನಮ್ಮ ಕಮಲನಾಭನದು ಈ ।
ಕಾಗದವನ್ನು ಓದಿಕೊಂಡು । ಕಾಲವ ಕಳೆಯಿರೊ ॥
ಕಾಮಕ್ರೋಧವ ಬಿಡಿರೆಂಬೊ । ಕಾಗದ ಬಂದಿದೆ ।
ನೇಮನಿಷ್ಠೆಯೊಳಿರಿರೆಂಬೊ । ಕಾಗದ ಬಂದಿದೆ ॥
ಹೆಣ್ಣಿನಾಶೆ ಬಿಡಿರೆಂಬೊ । ಕಾಗದ ಬಂದಿದೆ ।
ಹೊನ್ನಿನಾಶೆ ಬಿಡಿರೆಂಬೊ । ಕಾಗದ ಬಂದಿದೆ ॥
ಮಣ್ಣಿನಾಶೆ ಬಿಡಿರೆಂಬೊ । ಕಾಗದ ಬಂದಿದೆ ।
ನಮ್ಮ ಕಮಲನಾಭನು ತಾನೆ ಬರೆದ । ಕಾಗದ ಬಂದಿದೆ ॥

ಇಲ್ಲಿ ದಾಸರು ಒಂದು ಲೌಕಿಕ ದೃಷ್ಟಾಂತದ ಮೂಲಕ ಸಾಮಾನ್ಯರ ಮನಸ್ಸಿನ ಮೇಲೆ ಅಚ್ಚೊತ್ತುವಂತೆ ಬೋಧಿಸಿದ್ದಾರೆ. ಮನೆಯಲ್ಲಿಯ ಹಿರಿಯರು ದೂರದಲ್ಲಿರುವ ಚಿಕ್ಕವರಿಗೆ ಹೇಗೆ ಜೀವಿಸಬೇಕೆಂಬ ಬಗ್ಗೆ ಆತ್ಮೀಯತೆಯಿಂದ

ಪತ್ರವನ್ನು ಬರೆದು ಬುದ್ಧಿ ಹೇಳುವಂತೆ ಇಲ್ಲಿ ಕಲ್ಪಿಸಲಾಗಿದೆ. ಇಂಥಲ್ಲಿ ಪರಮಾತ್ಮನು ಅಗಮ್ಯನಾಗಿ ಅನಿರ್ವಚನೀಯನಾಗಿ ಇರದೆ, ಅವನು ಭಕ್ತ ಸಮೂಹದ ಜೊತೆಗೆ ಹಿರಿಯನಂತೆ ಉಪದೇಶಿಸುತ್ತ ಇರುವನು ಎಂಬ ಭಾವವಿದೆ. ಜನ-ಸಾಮಾನ್ಯರಿಗೆ ಈ ಬಗೆಯ ಉಪದೇಶವು ಆಕರ್ಷಕವಾಗಿಯೂ ತೋರುತ್ತದೆ.

ಇನ್ನೊಂದೆಡೆಗೆ ಶ್ರೀಕೃಷ್ಣನಾಮವೆಂದರೆ ಕಲ್ಲುಸಕ್ಕರೆ ಯಷ್ಟು ಸವಿಯಾದದ್ದು ಎಂದಿದ್ದಾರೆ—

"ಕಲ್ಲುಸಕ್ಕರೆ ಕೊಳ್ಳಿರೋ ।
ನೀವೆಲ್ಲರು ಕಲ್ಲುಸಕ್ಕರೆ ಕೊಳ್ಳಿರೋ ॥
ಕಲ್ಲುಸಕ್ಕರೆ ಸವಿ ಬಲ್ಲವರೆ ಬಲ್ಲರು ।
ಫುಲ್ಲಲೋಚನ ಶ್ರೀಕೃಷ್ಣನಾಮವೆಂಬ ॥
ನಷ್ಟ ಬೀಳುವುದಲ್ಲ ನಾತ ಹುಟ್ಟುವುದಲ್ಲ ।
ಎಷ್ಟು ಒಯ್ದರು ಬೆಲೆ ರೊಕ್ಕವಿದಕಿಲ್ಲ ॥
ಕಟ್ಟಿರುವೆಯು ತಿಂದು ಕಡಿಮೆಯಾಗುವುದಲ್ಲ ।
ಪಟ್ಟಣದೊಳಗೆ ಪ್ರಸಿದ್ಧವಾಗಿರುವಂಥ ॥
ಸಂತೆಸಂತೆಗೆ ಹೋಗಿ ಶ್ರಮಪಡಿಸುವುದಲ್ಲ ।
ಸಂತೆಯೊಳಗಿಟ್ಟು ಮಾರುವುದಲ್ಲ ॥
ಸಂತತ ಭಕ್ತರ ನಾಲಿಗೆ ಸವಿಗೊಂಬ ।
ಕಾಂತ ಪುರಂದರ ವಿಠಲನ ನಾಮವೆಂಬ ॥"

ಮತ್ತೊಂದು ಕೀರ್ತನೆಯಲ್ಲಿ—

"ಜೇನು ಬಂದಿದೆ । ಜನರು ಜೇನು ಕೊಳ್ಳಿರೊ ॥
ಮಧುರವಾದ ಕೊಂಬು ಜೇನು ಮಾಧವನ ನಾಮಸ್ಮರಣೆ ।
ಸದರವಾದ ಜನರಿಗಿಲ್ಲ: ಜನನಮರಣವಯ್ದೂ ಬಗೆ ॥
ಸತ್ತ ಸಾಯದವರಿಗೆ ಪರ ಇಹಂಗಳೆರಡು ಉಂಟು ನಮ್ಮ ।
ಪದ್ಮನಾಭನ ನಾಮಸ್ಮರಣೆ ಸದನ ಮಾಡಿಕೊಂಬವರಿಗೆ ॥

ಇಂಥ ಹಾಡುಗಳು ಜನರ ಮನಸ್ಸನ್ನು ಸೆರೆಹಿಡಿದಿದ್ದರಲ್ಲಿ ಏನಾಶ್ಚರ್ಯ ? ಇದೇ ಬಗೆಯ ಇನ್ನೊಂದು ಕೀರ್ತನೆಯಲ್ಲಿ—

"ಬುತ್ತಿಯ ಕಟ್ಟೋ । ಮನುಜ ಬುತ್ತಿಯ ಕಟ್ಟೋ ॥
ಬುತ್ತಿಯನ್ನು ಕಟ್ಟಿದರೆ । ಎತ್ತಲಾದರು ಉಣಬಹುದು ॥
ಧರ್ಮವೆಂಬ ಮಡಿಕೆಯಲ್ಲಿ ॥ ನಿರ್ಮಲಮನ ಗಂಗೆ ತುಂಬಿ ॥
ಸುಮ್ಮಾನದುರಿಯ ಹಚ್ಚಿ । ಒಮ್ಮಾನಕ್ಕನ್ನ ಬಾಗಿ ॥
ಕರ್ತು ಪುರಂದರ ವಿಠಲನ ।
ತತ್ವವೆಂಬ ಬುತ್ತಿಯನ್ನು ॥
ಹತ್ತಿರ ತಂದಿಟ್ಟುಕೊಂಡು ನಿತ್ಯ ಉಂಡು ತೃಪ್ತಿ ಪಡಿರೋ ॥"

ಪುರಂದರರು ಸ್ತ್ರೀಯರಿಗೂ ಉಚಿತವಾದ ಉಪದೇಶ ನೀಡಿ-ದ್ದಾರೆ. ನವ ವಧುವು ಅತ್ತೆಯ ಮನೆಗೆ ಹೋದ ಮೇಲೆ ಹೇಗಿರಬೇಕು ? ಕಾಳಿದಾಸನ 'ಶಾಕುಂತಲ' ನಾಟಕದಲ್ಲಿಯ ಪ್ರಸಿದ್ಧವಾದ ಕಣ್ವಮುನಿಯ ಉಪದೇಶದ ಕಾಲದಿಂದ ನಮ್ಮ

ಜನಪದ ಸಾಹಿತ್ಯದಲ್ಲಿ ಕೂಡ "ಅತ್ತೆಯ ಮನ್ಯಾಗ ಮುತ್ತಾಗಿರಬೇಕು" ಎಂದು ಮುಂತಾಗಿ ಉಪದೇಶ ಮಾಡಲಾಗಿದೆ. ಅದರಂತೆ ಪುರಂದರರು—

"ತಂಗಿಗ್ಹೇಳಿದ ಕೃಷ್ಣ ಚಂದದಲಿ ಬುದ್ಧಿ ॥
ಅತ್ತೆಯ ಮನೆಯಲ್ಲಿ ಇರುವಂಥ ಸುದ್ದಿ ॥
ಯಾರೇನು ಅಂದರೂ ಮೋರೆಯನು ತಿರುಹದಿರು ।
ಮೋರೆಮೇಲೆ ಕೈಯೆತ್ತಿ ಬಲ್ಲಳೆಂದೆಣಿಸಿ ।
ವಾರಿಗೆವರ ಕೂಡಿ ನೀರನ್ನು ತರುವಾಗ ।
ವಾರೆಗಣ್ಣಲಿ ನೋಟ ನೋಡದಿರು ಕಂಡ್ಯ ।
ಪರರ ಒಡವೆಯ ಕಂಡು ದುರುಳ ಮಾತಾಡದಿರು ।
ನೆರೆಹೊರೆಯರಿಗೆ ನೀನು ತಲೆವಾಗಿ ನಡೆಯೆ ।
ಹಾಕಿದ್ದು ನೀನುಂಡು ಬೇಕೆಂದು ಬೇಡದಿರು ।
ಸಾಕು ಸಾಕು ಎಂಬ ನಾಚಿಕೆಯ ಹಿಡಿಯೆ ।
ಇಷ್ಟರು ಅಂದರು ನಿಷ್ಠೂರವಾಡದಿರು ।
ಘಟ್ಟಿ ಮಾಡವ್ವ ನಿನ್ನ ಮನಸ್ಸು ।
ಸೃಷ್ಟಿಯೊಳಗೆ ನಮ್ಮ ಪುರಂದರ ವಿಠಲನ್ನ ।
ಶ್ರೇಷ್ಠನಾದ ಕೃಷ್ಣನ್ನ ತಂಗಿಯೆಂದೆನಿಸೆ ।"

ಇಂಥ ಕೀರ್ತನೆಗಳಲ್ಲಿ ಭಾರತೀಯ ಗೃಹಿಣಿಯ ನಿತ್ಯ ಜೀವನದ ರೀತಿನೀತಿಗಳು ಮೋಹಕವಾಗಿ ಚಿತ್ರಿತವಾಗಿವೆ.

ಪುರಂದರರ ಪ್ರಕಾರ ವೈರಾಗ್ಯವೆಂದರೆ ಮನೆಮಾರು ಬಿಟ್ಟು, ಹೆಂಡತಿ ಮಕ್ಕಳನ್ನು ತ್ಯಜಿಸಿ ಅಡವಿಗೋಡುವುದಲ್ಲ.

ಭಕ್ತನು ಗೃಹಸ್ಥನಾಗಿಯೇ ಇದ್ದು ಮುಕ್ತಿಯನ್ನು ಹೊಂದಬಹುದು. ಪ್ರಪಂಚದಲ್ಲಿ ಇದ್ದೂ ಇಲ್ಲದಂತೆ, ನಿರ್ಲಿಪ್ತನಾಗಿ ಮನುಷ್ಯನು ಜೀವಿಸಬೇಕು. ಭಗವದ್ಗೀತೆಯಲ್ಲಿ ಹೇಳಿದಂತೆ ಮಾನವನ ಜೀವನವು ನಿಷ್ಕಾಮವಾದಾಗ ಅವನು ಪಾಪ-ಪುಣ್ಯಗಳ ಫಲದಿಂದ ನಿರ್ಲಿಪ್ತನಾಗಿ ಉಳಿಯುವನು. ಪುರಂದರರ ಕೀರ್ತನೆಗಳಲ್ಲಿಯೂ ಇದೇ ನಿರ್ಲಿಪ್ತತೆಯು ಉಪದೇಶಿಸಲ್ಪಟ್ಟಿದೆ. ಒಂದೆಡೆಗೆ ಅವರು—

"ಇರಬೇಕು ಇರದಿರಬೇಕು ।
ಸಂಸಾರದಿ ಜನಕಾದಿ ರಾಜ ಋಷಿಗಳಂತೆ ।
ಮಿಥಿಲಾ ಪಟ್ಟಣವು ದಹಿಸಿತೆಂಬುದ ಕೇಳಿ ।
ಮಿಥಿಲೇಶ "ಮಮ ಕಿಂಚಿನ್ನ ದಹ್ಯತೇ" ಎಂಬಂತೆ ಇರಬೇಕು ॥
ದಧೀಚಿ ಋಷಿ ತನ್ನ ಅಸ್ಥಿ ಸುರರಿಗಿತ್ತು ।
ಮಧುವೈರಿ ವೈಕುಂಠಪುರವಿತ್ತ ತೆರದಂತೆ ಇರಬೇಕು ॥
ಪುರಂದರ ವಿಠಲನ್ನ ದಾಸರ ಸಂಗಡ ।
ಪುತ್ರಮಿತ್ರ ಕಳತ್ರ ಬಂಧುಗಳಂತೆ ಇರಬೇಕು ॥"

ಎಂದು ಬೋಧಿಸಿದ್ದಾರೆ. ಇಂಥಲ್ಲಿ ಪುರಂದರರು ಕರ್ಮಯೋಗದ ಸಂದೇಶವನ್ನು ಜಗತ್ತಿಗೆ ಬೀರಿದ್ದಾರೆ. ಇನ್ನೊಂದು ಕೀರ್ತನೆಯಲ್ಲಿ ಸುಂದರವಾದ ದೃಷ್ಟಾಂತಗಳನ್ನು ಕೊಡುತ್ತ ಸಂಸಾರದಲ್ಲಿ ಹೇಗಿರಬೇಕೆಂಬುದನ್ನು ಉಪದೇಶಿಸಿದ್ದಾರೆ. ಸಂಸಾರವು ನಾಲ್ಕು ದಿನದ ಆಟ; ಊರಿನಲ್ಲಿ ನೆರೆದ ಸಂತೆ.

ಅದನ್ನು ವಿವರಿಸುತ್ತ ಪುರಂದರರು ಹೀಗೆ ಹಾಡಿದ್ದಾರೆ—

"ಹೇಗಿರಬೇಕು ಸಂಸಾರದಲ್ಲಿ ।
ಹೀಗೆ ಬರೆದಿರಲು ಪ್ರಾಚೀನದಲ್ಲಿ ॥
ಆಡುವ ಮಕ್ಕಳು ಮನೆಯ ಕಟ್ಟಿದರು ।
ಆಡಿ ಸಾಕೆಂದು ಮುರಿದು ಓಡಿದರು ॥
ಸಂತೆಯು ನೆರೆಯಿತು ನಾನಾಪರಿ ।
ಪಾಂಥಸ್ಥರು ಹೋದರು ತಂತಮ್ಮ ದಾರಿ ॥
ಹಕ್ಕಿ ಬಂದಿತ್ತು ಅಂಗಳದಲ್ಲಿ ।
ಹಾರಿ ಹೋಯಿತು ಆ ಕ್ಷಣದಲ್ಲಿ ॥
ವಸ್ತಿಗಾರನು ವಸ್ತಿಗೆ ಬಂದ ।
ಹೊತ್ತಾರೆಯೆದ್ದು ಹೊರಟುಹೋದ ॥"

ಇಲ್ಲಿ ಬಂದ ದೃಷ್ಟಾಂತಗಳಿಲ್ಲ–ಎಂದರೆ, ಸಂತೆ, ಹಕ್ಕಿ, ವಸ್ತಿಗಾರ ಇತ್ಯಾದಿಗಳು ಸಂಸಾರವು ಎಷ್ಟು ಅಶಾಶ್ವತವಾಗಿದೆ ಮತ್ತು ಹೆಂಡತಿ ಮಕ್ಕಳು, ಬಂಧು ಬಳಗ ಮುಂತಾದ ಸಂಬಂಧಗಳು ಎಷ್ಟು ಕ್ಷಣಿಕವಾಗಿವೆಯೆಂಬುವನ್ನು ಮಾರ್ಮಿಕವಾಗಿ ಚಿತ್ರಿಸುತ್ತವೆ.

ಪುರಂದರರು ವೈರಾಗ್ಯಶೀಲರಾಗಿದ್ದರೂ ಜನತೆಗೆ ಪ್ರವೃತ್ತಿಮಾರ್ಗವನ್ನು ಬೋಧಿಸಿದರು. ಸಂಸಾರದಿಂದ ನಾವು ಓಡಿಹೋಗಬೇಕಾಗಿಲ್ಲ. ಬರುವ ಕಷ್ಟಗಳನ್ನು ಧೈರ್ಯದಿಂದ ಎದುರಿಸಬೇಕು. ಎಂಥ ಆಪತ್ಕಾಲದಲ್ಲಿಯೂ ಮನುಷ್ಯನು ಅಧೀರನಾಗದೆ ಪರಮಾತ್ಮನಲ್ಲಿ ನಂಬಿಗೆಯನ್ನಿಟ್ಟು ಜೀವನದಲ್ಲಿ ಮುಂದುವರಿಯಬೇಕು. ಅವರೇ ಒಂದೆಡೆಗೆ–

"ಬಂದದ್ದೆಲ್ಲ ಬರಲಿ ಗೋವಿಂದನ ದಯೆ ನಮಗಿರಲಿ" ಎಂದಿದ್ದಾರೆ. ಸಂಸಾರವೆಂಬುದೊಂದು ಮಹಾಸಾಗರದಂತಿದೆ. ಇದು ಪ್ರಕ್ಷುಬ್ಧವಾದಾಗ ದೊಡ್ಡ ತೆರೆಯಂತೆ ಕಷ್ಟಗಳು ಮನುಷ್ಯನ ಮೇಲೆ ಏರಿ ಬರುತ್ತವೆ, ಅದಕ್ಕಾಗಿ—

"ಈಸಬೇಕು ಇದ್ದು ಜಯಿಸಬೇಕು ।
ಹೇಸಿಗೆ ಸಂಸಾರದಲ್ಲಿ ಆಶೆ ಲೇಶ ಇಡದ್ಹಾಗೆ ॥
ತಾಮರಸ ಜಲದಂತೆ ।
ಪ್ರೇಮವಿಟ್ಟು ಭವದೊಳು ॥
ಗೇರುಹಣ್ಣಿನಲ್ಲಿ ಬೀಜ ।
ಸೇರಿದಂತೆ ಸಂಸಾರದಿ ॥
ಮೀರಿಯಾಶೆ ಮಾಡದಲೆ ।
ಧೀರ ಕೃಷ್ಣನ ಭಕ್ತರೆಲ್ಲ ॥"

ಎಂದು ಉಪದೇಶಿಸಿದ್ದಾರೆ. ಇನ್ನೊಂದೆಡೆಗೆ ಪುರಂದರರು—

"ಕಲ್ಲಾಗಿ ಇರಬೇಕು ಕಠಿಣ ಭವತೊರೆಯೊಳಗೆ ।
ಬಿಲ್ಲಾಗಿರಬೇಕು ಬಲ್ಲವರೊಳು ॥
ಮೆಲ್ಲನೆ ಮಾನವ ಮೆಚ್ಚಿಸಬೇಕು ।
ಬೆಲ್ಲವಾಗಿರಬೇಕು ಬಂಧು ಜನರೊಳಗೆ ॥"

ಎಂದು ಬೇರೆ ಬೇರೆ ಪ್ರಸಂಗದಲ್ಲಿ ಮನುಷ್ಯನು ಹೇಗಿರ-ಬೇಕೆಂಬುದನ್ನು ವಿವರಿಸಿದ್ದಾರೆ.

ಹೀಗೆ ಪುರಂದರರು ಸಮಾಜಕ್ಕೆ ಬೋಧಿಸುವ ಕಾಲದಲ್ಲಿಯೇ ತಮ್ಮನ್ನೂ ಪರೀಕ್ಷಿಸಿಕೊಂಡರು. ತಮ್ಮ ಅಂತರ್ಯದಲ್ಲಿಯ ಕುಂದುಕೊರತೆಗಳು ಯಾವವು ಎಂಬುದನ್ನು ತೂಗಿ ನೋಡಿದರು. ತಮ್ಮ ಮನಸ್ಸಿಗೆ ಅನೇಕ ಸಾರೆ ಎಚ್ಚರಿಕೆಯುನ್ನಿತ್ತರು, ಇಂಥ ಕೀರ್ತನೆಗಳನ್ನು ಓದುವಾಗ ಪುರಂದರರ ಹಿರಿಮೆಯು ಕಲ್ಪನೆ ನಮಗೆ ಬರುತ್ತದೆ.

“ಎಚ್ಚರಿಕೆ ಎಚ್ಚರಿಕೆ ಮನವೆ ।
ಅಚ್ಯುತನ ಪಾದಾರವಿಂದದಲಿ ॥
ಬಲ್ಲಿದ ನೀನೆಂದು ಬಡವರ ಬಾಯ ।
ಬಡಿಯದಿರೆಚ್ಚರಿಕೆ ।
ಎಳ್ಳಷ್ಟು ತಪ್ಪಿದರೆ ಯಮನಾಳು ನರಕಕ್ಕೆ ।
ದೊಯ್ವನೆಚ್ಚರಿಕೆ

ಎಂದು ತಮ್ಮ ಮನಸ್ಸಿಗೆ ಎಚ್ಚರಿಕೆ ಕೊಟ್ಟಿದ್ದಾರೆ. ಮತ್ತೊಂದು ಹಾಡಿನಲ್ಲಿ ತಮ್ಮನ್ನೇ ನಿಂದಿಸಿಕೊಳ್ಳುತ್ತ—

“ಸುಮ್ಮನೆ ವೈಷ್ಣವನೆಂಬಿರಿ ।
ಪರಬೊಮ್ಮ ಸುಜ್ಞಾನವರಿಯದ ಮನುಜರಮ ॥
ಊರ ಮಾತುಗಳ ನಾನಾಡಿಪೆನಲ್ಲವೆ ॥
ನಾರಾಯಣಕೃಷ್ಣ ಶರಣೆಂದೆನೆ ॥
ನಾರಿಯರಿಗೆ ಮೆಚ್ಚಿ ಮರುಳಾದೆನಲ್ಲವೆ ।
ಗುರುಹಿರಿಯರಿಗೆ ನಾ ನಮಿಸಿದೆನೇನಯ್ಯ ॥”

ಎಂದುಕೊಂಡಿದ್ದಾರೆ.

ಮತ್ತೊಂದು ಕೀರ್ತನೆಯಲ್ಲಿ—

ಏನು ಬಂದ್ಯೋ ಜೀವವೆ ವ್ಯರ್ಥವಾಗಿ ।
ಜ್ಞಾನದಿಂದಲಿ ತಿಳಿದು ಪರಗತಿಯನು ಕೂಡು ॥''

ಎಂದು ತಮಗೇ ಉಪದೇಶಿಸಿಕೊಂಡಿದ್ದಾರೆ. "ಪಾಪಿಗಳೊಳಗೆಲ್ಲಾ ನಾನು ವೆಗ್ಗಳನೆಂದು ತಿಳಿಯಲಿಲ್ಲ । ದಯಾರೂಪ ಕೃಪಾಂಬುಧಿ ನೀನಲ್ಲದಿಲ್ಲವೆಂದರಿಯಲಿಲ್ಲ ॥" ಎಂದೂ ತಮ್ಮ ಮನಸ್ಸಿಗೆ ಹೇಳಿಕೊಂಡಿದ್ದಾರೆ. ಕೆಲವು ಸಂದರ್ಭಗಳಲ್ಲಿ ದಾಸರು ಪರಮಾತ್ಮನ ಕರುಣಾಮಯತೆಯನ್ನು ಪ್ರಶ್ನಿಸಿದ್ದುಂಟು. 'ಕರುಣಾಕರ ನೀನೆಂಬುವುದೇತಕೊ । ಭರವಸವಿಲ್ಲೆನಗೆ" ಎಂದು ನುಡಿದು "ಕರುಣಾಕರ ನೀನಾದರೆ ಈಗಲೆ । ಕರ ಪಿಡಿದೆನ್ನನು ಹರಿ ಕಾಯೋ ॥" ಎಂದು ಪ್ರಾರ್ಥಿಸಿಕೊಂಡಿದ್ದಾರೆ.

ಭಕ್ತನ ಜೀವನದಲ್ಲಿ ಭಕ್ತಿಯು ಸ್ಥಾಯಿಯಾಗಿದ್ದರೂ ಸಂದೇಹ, ನಿರಾಶೆ, ಭಯ, ಅತೃಪ್ತಿ ಮೊದಲಾದ ಕ್ಷಣಿಕ ಸಂಚಾರಿ ಭಾವಗಳು ಬಂದು ಹೋಗುತ್ತವೆ. ಉದಾಹರಣೆಗಾಗಿ ಪುರಂದರರು ಒಂದು ಸಲ—

"ನೀನೇಕೆ ಕಡೆಗಣ್ಣೊಳೆನ್ನ ನೋಳ್ಪೆ ।
ಕರುಣಾಕರನಲ್ಲವೆ ॥
ಅತ್ಯಂತ ಅಪರಾಧಿ ನಾನಾಪರೇನಯ್ಯ ।
ಇತ್ತ ಬಾರೆನ್ನ ಬಾರದೆ ?" ॥

ಎಂದು ಕೇಳಿದ್ದಾರೆ. ಮತ್ತೊಂದು ಸಾರೆ "ಏಕೆ ನಿರ್ದಯ ನಾಗುವೆ ರಂಗಯ್ಯ । ರಂಗ ಏಕೆ ನಿರ್ದಯನಾಗುವೆ ॥" ಎಂದು ಪ್ರಶ್ನಿಸಿದ್ದಾರೆ. "ಸುಲಭನು ನೀನೆಂದು । ನಿನ್ನ ಬಳಿಗೆ । ಬಳಲಿ ಬಂದೆನೊ ದೊರೆಯೆ ॥ ಸುಲಭ ನೀನಾದರೆ ಒಲಿದು ಸಲುಹಬೇಕೊ । ಚೆಲುವ ಮೂರುತಿ ಕೃಷ್ಣ ಎನ್ನ ಬಿಟ್ಟ-ಗಲದೆ ॥" ಎಂದು ಅಲ್ಪರಿದಿದ್ದಾರೆ. ಮತ್ತೊಮ್ಮೆ "ಕರೆದರೆ ಓ ಎನ್ನಬಾರದೆ । ಲಕ್ಷ್ಮೀರಮಣ । ಕರೆದರೆ ಓ ಎನ್ನಬಾರದೆ ॥" ಎಂದು ಕೇಳಿದ್ದಾರೆ. ಮಗುದೊಮ್ಮೆ "ನಿನ್ನನಾಶ್ರಯಿಸುವೆನು ನಿಗಮಗೋಚರ ನಿತ್ಯ । ಬೆನ್ನ ಬಿಡದೆ ಕಾಯೊ ॥" ಎಂದು ಬಿನ್ನವಿಸಿದ್ದಾರೆ. ಇನ್ನೊಮ್ಮೆ "ತೇಲಿಸೊ ಇಲ್ಲ ಮುಳುಗಿಸೊ । ನಿನ್ನ ಪಾಲಿಗೆ ಬಿದ್ದೆನೊ ಪರಮ ಕೃಪಾಳು ॥" ಎಂದು ಅನನ್ಯ ಭಕ್ತಿಯಿಂದ ಶರಣಾಗತರಾಗಿದ್ದಾರೆ. ಪುರಂದರರು ದೇವರ ಕೂಡ ಸಲಿಗೆಯನ್ನು ಬೆಳಸಿದ್ದುಂಟು. ಉದಾಹರಣೆಗೆ "ನೀ ಕೊಡೆ ನಾ ಬಿಡೆ ಕೇಳೈಯ್ಯ । ರಂಗ ಗೋಕುಲ ಪತಿ ಗೋವಿಂದಯ್ಯ ॥" ಎಂಬುದನ್ನಾಗಲಿ ಅಥವಾ "ಎನಗೂ ಆಣೆ । ರಂಗ ನಿನಗೂ ಆಣೆ । ಎನಗೂ ನಿನಗೂ ಇಬ್ಬರಿಗೂ ಭಕ್ತರ ಆಣೆ ॥" ಎಂಬ ಹಾಡುಗಳನ್ನು ನೋಡಬಹುದು. ಪರಮಾತ್ಮನ ಕೃಪೆಯಿದ್ದ ಮೇಲೆ ಪುರಂದರರಿಗೆ ಹೀಗೆ ನಿರ್ಭೀತಿಯೂ ಅನಿಸುತ್ತದೆ—"ನಾನೇಕೆ ಪರದೇಶಿ ನಾನೇಕೆ ಬಡವನೊ । ಘನ್ನ ಮಾನಾಭಿಮಾನ ವಿಟ್ಠಲ ನೀನಿರಲಾಗಿ ॥" ಹೀಗೆ ಪುರಂದರರ ಮನಸ್ಸಿನಲ್ಲಿ ಮೊದಮೊದಲು ಅಸಹಾಯತೆ, ಸಂದೇಹ, ಭಯ, ಮೊದಲಾದ ಕ್ಷಣಿಕ ದೌರ್ಬಲ್ಯಗಳು ಬಂದು ಹೋದರೂ ಕ್ರಮೇಣ ಅವರಲ್ಲಿ ಪರಮಾತ್ಮನನ್ನು

ಕುರಿತ ಭಕ್ತಿ, ದೃಢ ವಿಶ್ವಾಸಗಳು ಬೆಳೆಯುತ್ತ ಹೋದವು. ಕೊನೆಗೆ ಅವರು ತಮ್ಮ ಭಕ್ತಿಯ ಮೂಲಕ ಪರಮಾತ್ಮ ಸಾಕ್ಷಾತ್ಕಾರವನ್ನು ಪಡೆದು ಧನ್ಯರಾದರು. ಅವರ ಧನ್ಯತೆಯು ಮುಂದಿನ ಕೀರ್ತನೆಯಲ್ಲಿ ವ್ಯಕ್ತವಾಗಿದೆ.

"ಏನೆಂದು ಹೇಳಲಿ ಆನಂದ ಸಂಭ್ರಮ । ಇನ್ನೇನಿನ್ನೇನು ॥
ಎನ್ನ ವಂಶಗಳೆಲ್ಲ ಪಾವನವಾದವು । ಇನ್ನೇನಿನ್ನೇನು ॥
ಚಿನ್ಮಯ ಪುರಂದರ ವಿಠಲಯ್ಯ ದೊರಕಿದ । ಇನ್ನೇನಿನ್ನೇನು ॥

## ೩. ಶ್ರೀ ಪುರಂದರದಾಸರ ಕೀರ್ತನೆಗಳಲ್ಲಿಯ ಸೊಗಸು

ಶಿವಶರಣರ ವಚನಗಳಂತೆ ಶ್ರೀ ಪುರಂದರರ ಕೀರ್ತನೆ-ಗಳು ಅವರ ಜೀವನದಲ್ಲಿಯ ಬೇರೆ ಬೇರೆ ಕಾಲಕ್ಕೆ ಹೃದಯ-ದಿಂದ ಹೊರಹೊಮ್ಮಿದ ಸುಂದರವಾದ ಹಾಡುಗಳಾಗಿವೆ. ಅವರ ಯಾವ ಒಂದು ಕೀರ್ತನೆಯೂ ಪ್ರಯತ್ನಪುರಸ್ಸರವಾಗಿ ಬರೆದದ್ದಾಗಿಲ್ಲ. ಅವರ ಭಕ್ತಜೀವನದ ಅನುಭವವನ್ನು ಬಣ್ಣಿಸುವಂಥ ಅಥವಾ ಜನರಿಗೆ ಉಪದೇಶಮಾಡುವಂಥ ಯಾವುದೇ ಕೀರ್ತನೆಯನ್ನು ನಾವು ನೋಡಿದರೂ ಅದರಲ್ಲಿ ದಾಸರ ವ್ಯಕ್ತಿತ್ವವು ಎದ್ದು ಕಾಣುತ್ತದೆ. ಪ್ರತಿಯೊಂದು ಕೀರ್ತನೆಯೂ ಒಂದೊಂದು ಭಾವವನ್ನೂ, ಆಗಿನ ಕಾಲದ ಅವರ ಮನಃಸ್ಥಿತಿಯನ್ನೂ ಯಥಾವತ್ತಾಗಿ ಚಿತ್ರಿಸುವ ಉತ್ಸ್ಫೂರ್ತವಾದ ಗೀತವಾಗಿರುವುದರಿಂದ, ವಚನಗಳಂತೆ ಕೀರ್ತನೆಗಳೂ ಕನ್ನಡದ ಭಾವಗೀತೆಗಳೆನ್ನಬಹುದು.

ಸಾಮಾನ್ಯವಾಗಿ ಪುರಂದರರ ಕೀರ್ತನೆಗಳು ಪಲ್ಲವಿ. ಅನುಪಲ್ಲವಿಗಳಿಂದ ಪ್ರಾರಂಭವಾಗಿ ಮೂರು ಅಥವಾ ಐದು

ನುಡಿಗಳುಳ್ಳದ್ದಾಗಿರುತ್ತದೆ. ಪ್ರತಿಯೊಂದು ನುಡಿಯಲ್ಲಿ ಕನ್ನಡಕ್ಕೆ ಸಹಜವಾದ ದ್ವಿತೀಯಾಕ್ಷರ ಪ್ರಾಸವು ಕಂಡುಬರುತ್ತದೆ. ಪುರಂದರರು ಭಾರತ, ರಾಮಾಯಣ, ಭಾಗವತ, ಪುರಾಣಗಳನ್ನು ಮತ್ತು ಶಾಸ್ತ್ರಗಳನ್ನು ಆಳವಾಗಿ ಅಭ್ಯಾಸ ಮಾಡಿದವರಾಗಿದ್ದರೂ ಅವರು ಉಪಯೋಗಿಸುವ ಭಾಷೆಯಲ್ಲಿ ಸಂಸ್ಕೃತದ ಪ್ರೌಢಿಮೆ ಎಲ್ಲಿಯೂ ಕಂಡು ಬರುವದಿಲ್ಲ; ಅದರ ಬದಲು ಉತ್ತರಕರ್ನಾಟಕದ ಜನಸಾಮಾನ್ಯರ ಆಡುನುಡಿಯು ಉಪಯೋಗಿಸಲ್ಪಟ್ಟಿದೆ. ವಚನಕಾರರಂತೆ ದಾಸರೂ ಸಾಮಾನ್ಯ ಜನರನ್ನು ಉದ್ದೇಶಿಸಿ ಉಪದೇಶ ಮಾಡಿರುವುದರಿಂದ ಈ ಬಗೆಯ ದೇಸಿನಿಷ್ಠತೆ ಕಂಡುಬರುತ್ತದೆ ಎನ್ನಬಹುದು. ಪುರಂದರರ ಕೀರ್ತನೆಗಳಲ್ಲಿಯ ಭಾಷೆ ಎಷ್ಟು ಹೃದ್ಯವಾಗಿದೆಯೆಂದರೆ ಅವರ ಎಷ್ಟೋ ಮಾತುಗಳು ನಾಣ್ಣುಡಿಗಳಾಗಿ ಜನತೆಯ ಜೀವನವನ್ನು ಸಂಸ್ಕರಿಸುವ ಹಿರಿಯ ಸಂಪತ್ತಾಗಿವೆ. ಉದಾಹರಣೆಗೆ— ಈಸಬೇಕು ಇದ್ದು ಜಯಿಸಬೇಕು, ಬೇವು ಬೆಲ್ಲದೊಳಿಡಲೇನು ಫಲ ? ನೆಂಟರಿಗೆ ಸಾಲವನು ಕೊಡುವಾತ ಮೂರ್ಖ, ಪಾಪಿ ಬಲ್ಲನೆ ಪರರ ಸುಖದುಃಖವ ? ನೀರ ಕಡೆದರಲ್ಲೇನುಂಟು ? ಅಂತಕನ ದೂತರಿಗೆ ಕಿಂಚಿತ್ತು ದಯವಿಲ್ಲ. ಮಂಡೆ ಬೋಳಾದರೆ ಮನವು ಬೋಳಾಯಿತೆ, ಕ್ರೋಧವ ಬಿಡದ ಸನ್ಯಾಸಿ ಶ್ವಾನೇಕೆ, ಗಾಳಿ ಬಂದ ಕೈಯಲ್ಲಿ ತೂರಿಕೊಳ್ಳಿರೊ, ಅರಿತು ಆಚಾರವನು ನಡೆಸದಾತನೆ ಹೊಲೆಯ, ಗಾಳಿಗಿಕ್ಕಿದ ದೀಪ ಬಾಳುಬದುಕಿಲ್ಲ, ಹುಟ್ಟಿಸಿದ ದೇವ ಹುಲ್ಲು ಮೇಯಿಸುವನಲ್ಲ, ಆನೆ ಮೇಲೆ ಬಪ್ಪಗೆ ಶ್ವಾನ ಕಚ್ಚಬಲ್ಲುದೆ — ಮುಂತಾದ ಅಸಂಖ್ಯ

ನಾಣ್ಣುಡಿ- ಜಾಣ್ಣುಡಿಗಳು ಪುರಂದರರ ಹಾಡುಗಳಲ್ಲಿ ಕಂಡು ಬರುತ್ತವೆ. ಇವುಗಳಲ್ಲಿ ಕೆಲವು ಶಿವಶರಣರ ವಚನಗಳಲ್ಲಿಯೂ ಕಂಡು ಬರುವುದರಿಂದ ಕನ್ನಡಿಗರ ನಾಲಿಗೆಯ ಮೇಲೆ ಮೊದಲಿನಿಂದಲೂ ನಲಿಯುತ್ತಿದ್ದ ಕೆಲವು ಲೋಕೋಕ್ತಿಗಳನ್ನೂ ದಾಸರು ಬಳಸಿರಬಹುದೆಂದು ತೋರುತ್ತದೆ.

ಪುರಂದರರ ಹಾಡುಗಳಲ್ಲಿ ಅನೇಕ ಸುಂದರವಾದ ಶಬ್ದಾಲಂಕಾರ, ಅರ್ಥಾಲಂಕಾರಗಳು ಉಪಯೋಗಿಸಲ್ಪಟ್ಟಿವೆ. ಅನುಪ್ರಾಸ ಯಮಕಗಳಿಗಾಗಿ— "ತಂಗಾಳಿ ವಶವಲ್ಲವೆ। ಅಂಗಳದೊಳಗೆ ಬೆಳದಿಂಗಳು ತುಂಬಿತು। ಚಂದನದಿ॥" ಇತ್ಯಾದಿ ಅಥವಾ "ರಕ್ಷಃ ಶಿಕ್ಷಣದಕ್ಷ ಪಾಂಡವ। ಪಕ್ಷರಕ್ಷ ಕಮಲಾಕ್ಷ॥" ಮೊದಲಾದವನ್ನು ನೋಡಬಹುದು. ಭಾವಕ್ಕೆ ಹೊಂದಿಕೊಂಡು ಸ್ವಭಾವೋಕ್ತಿ, ಉಪಮೆ, ರೂಪಕ, ವಿರೋಧಾಭಾಸ, ಅರ್ಥಾಂತರನ್ಯಾಸ, ವಕ್ರೋಕ್ತಿ ಮೊದಲಾದ ಅರ್ಥಾಲಂಕಾರಗಳು ಪುರಂದರರ ಹಾಡುಗಳಲ್ಲಿ ಸಹಜ ಸುಂದರವಾಗಿ ಕಂಡುಬರುತ್ತವೆ.

ಪುರಂದರರ ಕೆಲವು ಹಾಡುಗಳಲ್ಲಿ ಅದ್ಭುತವಾದ ಚಿತ್ರಣ ಶಕ್ತಿ ಮತ್ತು ನಾದಲೋಲತೆ ವ್ಯಕ್ತವಾಗಿವೆ. ಉದಾಹರಣೆಗೆ—

"ಆಡಿದನು ರಂಗ ಅದ್ಭುತದಿಂದಲಿ।  
ಕಾಳಿಂಗನ ಫಣೆಯಲಿ॥  
ರಂಭೆ ಊರ್ವಶಿ ರಮಣಿಯರೆಲ್ಲರು।  
ಚಂದದಿಂದ ಭರತ ನಾಟ್ಯವ ನಟಿಸೆ॥

ಝುಂತಟ ತಕಧಿಮಿ ತಧಿಗಿಣಿ ತೋಂ ಎಂಪು ।
ಝುಂಪೆ ತಾಳದಿ ತುಂಬುರನೊಪ್ಪಿಸೆ ।
ಧಾಮ ಪಪಾಧಸರೀ ಎಂದು ಧ್ವನಿಯಿಂದ ॥ '

ಈ ಹಾಡಿನಲ್ಲಿಯು ನಾದಶಕ್ತಿಯನ್ನು ನೋಡಬಹುದು. ಅಥವಾ ಇನ್ನೊಂದು ಹಾಡಿನಲ್ಲಿ—

"ಬಂದನೇನೆ ರಂಗ ಬಂದನೇನೆ ।
ಘಿಲು ಘಿಲು ಘಿಲುರೆಂಬ ಪೊನ್ನಂದುಗೆ ಗೆಜ್ಜೆ॥
ಹೊಳೆ ಹೊಳೆಯುವ ಪಾದಸೂರುತ ।
ನಲಿನಲಿದಾಡುವ ಉಂಗುರ ಅರಳೆಲೆ ।
ಥಳ ಥಳ ಥಳ ಹೊಳೆಯುತ ಶ್ರೀ ಕೃಷ್ಣ ॥ "

ಎಂದಿದೆ. ಮತ್ತೊಂದು ಪ್ರಸಿದ್ಧ ಹಾಡಿನಲ್ಲಿ ಭಾಗ್ಯದ ಲಕ್ಷ್ಮಿಯು—

"ಗೆಜ್ಜೆಕಾಲ್ಗಳ ಧ್ವನಿಯ ತೋರುತ ।
ಹೆಜ್ಜೆಯ ಮೇಲೆ ಹೆಜ್ಜೆಯನಿಕ್ಕುತ ॥
ಸಜ್ಜನ ಸಾಧು ಪೂಜೆಯ ವೇಳೆಗೆ ।
ಮಜ್ಜಿಗೆಯೊಳಗಿನ ಬೆಣ್ಣೆಯಂತೆ ॥"

ಬರುವುದನ್ನು ವರ್ಣಿಸುವ ಹಾಡಿನಲ್ಲಿಯು ಸಹಜಪ್ರಾಸ, ಸುಂದರ ಚಿತ್ರ ಮತ್ತು ಹೊಸ ಹೋಲಿಕೆ ಇವುಗಳನ್ನು ನೋಡಬಹುದು.

"ರಂಗ ಕೊಳಲನೂದಲಾಗಿ ಮಂಗಳಮಯವಾಯ್ತು ಧರೆ" ಎಂಬ ಸುಂದರವಾದ ಹಾಡಿನಲ್ಲಿ ಪುರಂದರರ ಸೌಂದರ್ಯ ದೃಷ್ಟಿ, ರಸಿಕತೆಗಳು ಚೆನ್ನಾಗಿ ವ್ಯಕ್ತವಾಗಿವೆ. ರಂಗ ಕೊಳಲನೂದಲು ಲೋಕಗಳೆಲ್ಲ ಮೈಮರೆತು ಆನಂದಮಯವಾದವಂತೆ.

"ಬಾಡಿದ ಅಲರು ಫಲಗೊಂಚಲು ಬಿಡೆ ।
ಪಾಡಲೊಲ್ಲವು ಅಳಿಕುಲಗಳು ॥
ತಳದುದಕ ಉಕ್ಕೇರಿ ಬಂದುವು ।
ತುಳಿಕಿ ಚೆಲ್ಲಾಡಿ ನಿಂದಳೆ ಯಮುನೆ ।
ಮೇಲೆ ಮೇಲೋಡಿ ಮೇಘಾಳಿ ಧಾರಿಟ್ಟವು ।
ಕಲ್ಲು ಕರಗಿ ನೀರಾದುವು ॥
ನಳಿನ ಚಂಪಕ ನಾಗ ಪುನ್ನಾಗ ಪಾಟಲ ಶಾವಂತಿಗೆ ।
ನೀಲಾಂಗನಂಘ್ರಿಗೆರಗಿದವು ॥"

ಈ ಹಾಡಿನಲ್ಲಿ ಸಕಲ ಸೃಷ್ಟಿಯೆಲ್ಲ ಸೌಂದರ್ಯ ಸ್ವರೂಪನಾದ ಶ್ರೀಕೃಷ್ಣನ ಮೋಹಕ ಕೊಳಲ ನಾದಕ್ಕೆ ಹೇಗೆ ಮಾರುಹೋಗಿ ಪರವಶವಾಯಿತೆಂಬುದನ್ನು ದಾಸರು ಬಹುಕಾವ್ಯಮಯವಾಗಿ ಬಣ್ಣಿಸಿದ್ದಾರೆ.

ಪುರಂದರರ ಹಾಡುಗಳು ಭಕ್ತಿರಸದಿಂದ ತುಂಬಿತುಳುಕುತ್ತವೆ. ಸಾಂಪ್ರದಾಯಿಕವಾಗಿ ಭಕ್ತಿಯನ್ನು ನವರಸಗಳಲ್ಲಿ ಅಲಂಕಾರಿಕರು ಸಮಾವೇಶ ಮಾಡದಿದ್ದರೂ ಕನ್ನಡನಾಡಿನ ಭಕ್ತಕವಿಗಳು ಭಕ್ತಿರಸವನ್ನು ತಮ್ಮ ಕಾವ್ಯಗಳಲ್ಲಿ ಪೋಷಿಸಿ-

ರುವದಲ್ಲದೆ ಅದಕ್ಕೆ ವಿಶೇಷ ಪ್ರಾಧಾನ್ಯವನ್ನು ಕೊಟ್ಟಿದ್ದಾರೆ. ಪರಮಾತ್ಮನನ್ನು ಕುರಿತ ಭಕ್ತಿಯು ಸದಾ ಸ್ಥಾಯಿಯಾಗಿ ಇರುವ ಭಕ್ತಕವಿಗಳು ನಿರ್ಮಿಸಿದ ಕಾವ್ಯದಲ್ಲಿ ಭಕ್ತಿಯು ರಸವಾದದ್ದರಲ್ಲಿ ಆಶ್ಚರ್ಯವೇನು ? ಅದರಂತೆ ಭಕ್ತ ಪುರಂದರರು ಭಕ್ತಿ ತನ್ಮಯರಾಗಿ ಕುಣಿಯುತ್ತ ಹಾಡಿದ ಅವರ ಕೀರ್ತನೆಗಳಲ್ಲಿ ಭಕ್ತಿತರಂಗಿಣಿಯು ಸೂಸಿ ಹರಿದಿದ್ದಾಳೆ. ವಿಶೇಷವಾಗಿ ಶೃಂಗಾರಭಕ್ತಿ, ವಾತ್ಸಲ್ಯಭಕ್ತಿ, ಸೇವ್ಯಸೇವಕ ಭಾವದ ಭಕ್ತಿ ಮೊದಲಾದ ಭಕ್ತಿಯ ಅನೇಕ ಪ್ರಕಾರಗಳು ಪುರಂದರರ ಹಾಡುಗಳಲ್ಲಿ ನಿರೂಪಿತವಾಗಿವೆ.

ತಂಬೂರಿಯೊಂದಿಗೆ ತಾಳಕ್ಕೆ ಉಚಿತವಾಗಿ ಹಾಡುವುದಕ್ಕಾಗಿ ದಾಸರು ಈ ಕೀರ್ತನೆಗಳನ್ನು ರಚಿಸಿದರು. ಸಂಗೀತದಿಂದ ಪರಮಾತ್ಮನನ್ನು ಒಲಿಸುವದು ಸುಲಭ ಸಾಧ್ಯವೆಂಬ ಮಾತು ಅನಾದಿಕಾಲದಿಂದಲೂ ರೂಢಿಯಲ್ಲಿದೆ. ಪ್ರಾಚೀನ ಕಾಲದಲ್ಲಿ ನಾರದರು ಸಂಗೀತದಿಂದ ವಿಷ್ಣುವನ್ನು ಆರಾಧಿಸಿದರು. ನಾರದರಿಂದಲೇ ಸಂಗೀತ ಕಲೆಯು ಭಾರತದಲ್ಲಿ ಬೆಳೆಯಿತು ಎಂದು ಹೇಳುವುದುಂಟು. ನಾರದರ ಅವತಾರವೆಂದು ಭಾವಿಕರು ತಿಳಿಯುವ ಪುರಂದರದಾಸರೂ ಕೂಡ ತಮ್ಮ ಹಾಡುಗಳಿಗೆ ಸಂಗೀತದ ಸವಿಯನ್ನು ಮೇಳವಿಸಿದ್ದಾರೆ. ತಮ್ಮದೇ ಒಂದು ಹಾಡಿನಲ್ಲಿ ಅವರು—

“ಕೇಳನೋ ಹರಿ ತಾಳನೋ ।
ತಾಳಮೇಳಗಳಿದ್ದು ಪ್ರೇಮವಿಲ್ಲದ ಗಾನ ॥
ತಂಬೂರಿ ಮೊದಲಾದ ಅಖಿಲ ವಾದ್ಯಗಳಿದ್ದು ।
ಕೊಂಬು ಕೊಳಲು ಧ್ವನಿಸ್ವರಗಳಿದ್ದು ॥

ತುಂಬುರನಾರದರ ಗಾನ ಕೇಳುವ ಹರಿ ।
ನಂಬಲಾರ ಈ ಡಂಭಕದ ಕೂಗಾಟ ॥"

ಎಂದಿದ್ದಾರೆ. ಅದೇ ಪ್ರಕಾರವಾಗಿ ವಿವಿಧ ರಾಗ ಮತ್ತು ತಾಳಗಳಿಗೆ ಹೊಂದಿಕೊಂಡು ಹಾಡಲು ಅನುಕೂಲವಾಗುವಂತೆ ಅವರು ತಮ್ಮ ಕೀರ್ತನೆಗಳನ್ನು ರಚಿಸಿದ್ದಾರೆ. ಇಂದು ಕೂಡ ಅವರ ಕೀರ್ತನೆಗಳನ್ನು ಆಯಾ ರಾಗಗಳಲ್ಲಿ ಅರ್ಥ-ವರಿತುಕೊಂಡು ಹಾಡಿದರೆ ಮಾತ್ರ ಅವುಗಳ ಹಿರಿಮೆಯು ಕಲ್ಪನೆ ನಮಗೆ ಉಂಟಾಗುವದು. ಕರ್ನಾಟಕ ಸಂಗೀತ ಶಾಸ್ತ್ರಕ್ಕೆ ಪುರಂದರದಾಸರು ಅಮೋಘವಾದ ಸೇವೆಯನ್ನು ಸಲ್ಲಿಸಿ ಆಂಧ್ರದ ತ್ಯಾಗರಾಜರಿಗೆ ಸ್ಫೂರ್ತಿಯನ್ನು ಕೊಟ್ಟ ವಿಷಯವು ಸರ್ವವಿದಿತವಾಗಿದೆ. ಆದರೂ ಈ ವಿಷಯದಲ್ಲಿ ಹೆಚ್ಚಿನ ಸಂಶೋಧನೆಯು ನಡೆಯುವುದು ಅತ್ಯವಶ್ಯವಾಗಿದೆ.

# ೪. ಶ್ರೀ ಪುರಂದರದಾಸರ ವ್ಯಕ್ತಿತ್ವ

ಕನ್ನಡ ನಾಡಿನಲ್ಲಿ ಸಮಾಜದ ಲೋಪದೋಷಗಳನ್ನು ತಿದ್ದಿ ಜನಸಾಮಾನ್ಯರ ಸಂಸ್ಕಾರವನ್ನು ಹೆಚ್ಚಿಸುವಂಥ ಎರಡು ದೊಡ್ಡ ಆಂದೋಲನಗಳು ಆಗಿಹೋದವು. ಮೊದಲನೆಯದು ಷಟ್ಸ್ಥಲಸಿದ್ಧಾಂತವನ್ನು ಆಧಾರವಾಗಿಟ್ಟುಕೊಂಡು ಶಿವಭಕ್ತಿಯನ್ನು ಜನತೆಯಲ್ಲಿ ಪ್ರಸಾರಮಾಡಿದ ಶಿವಶರಣರ ಮಹಾ ಕಾರ್ಯವಾಗಿದ್ದರೆ, ಎರಡನೆಯದು ದ್ವೈತಸಿದ್ಧಾಂತವನ್ನಿಟ್ಟುಕೊಂಡು ಜನತೆಯಲ್ಲಿ ಹರಿಭಕ್ತಿಯನ್ನು ಪ್ರಸಾರಮಾಡಿದ ಹರಿದಾಸರ ಸೇವೆಯಾಗಿದೆ. ಈ ಎರಡೂ ಆಂದೋಲನಗಳಲ್ಲಿ ಅನೇಕ ದೃಷ್ಟಿಯಿಂದ ಸಾಮ್ಯವು ಕಂಡುಬರುತ್ತದೆ. ಶಿವಶರಣರು ಮತ್ತು ಹರಿದಾಸರು ಸಾಮಾನ್ಯ ಜನತೆಯ ಉದ್ಧಾರವನ್ನು ತಮ್ಮ ಲಕ್ಷ್ಯವಾಗಿಟ್ಟುಕೊಂಡಿದ್ದರು. ಜನತೆಯಲ್ಲಿ ಭಕ್ತಿಭಾವ ಬೆಳೆಯಬೇಕು; ನೀತಿ ಸದಾಚಾರಗಳು ನೆಲೆಗೊಳ್ಳಬೇಕು; ಪ್ರತಿಯೊಬ್ಬನು ಇಹ ಪರಗಳಲ್ಲಿ ಹಿತವನ್ನು ಪಡೆಯಬೇಕೆಂಬುದು ಅವರೀರ್ವರ ಉದ್ದೇಶವಾಗಿತ್ತು. ಇಬ್ಬರಿಂದಲೂ ಕನ್ನಡ ನಾಡಿನ ಸಾಮಾಜಿಕ, ಧಾರ್ಮಿಕ ಮತ್ತು ಸಾಹಿತ್ಯಿಕ ಉನ್ನತಿಯು ಸಾಧಿಸಲ್ಪಟ್ಟಿತು. ಶಿವಶರಣರು ವಚನಗಳೆಂಬ ಅಪೂರ್ವ ರೂಪವನ್ನು ಕನ್ನಡಕ್ಕೆ

ಕೊಟ್ಟಿದ್ದರೆ ಹರಿದಾಸರು ಭಕ್ತಿ-ಪ್ರಮಾಣವಾದ ಕೀರ್ತನೆ-ಗಳನ್ನು ಕನ್ನಡ ಜನತೆಗೆ ನೀಡಿದ್ದಾರೆ. ಅವರೀರ್ವರೂ ಮಹಾ ವ್ಯಕ್ತಿತ್ವಸಂಪನ್ನರಾಗಿದ್ದ ಮೂಲಕ ಅವರ ಕಾರ್ಯದ ಪರಿಣಾಮವಾಗಿ ಕನ್ನಡನಾಡಿನ ಸರ್ವಾಂಗೀಣ ಉನ್ನತಿಯು ಸಾಧಿಸಲ್ಪಟ್ಟಿತು. ಹರಿದಾಸರ ಕೀರ್ತನೆಗಳಿಗೂ ಶಿವಶರಣರ ವಚನಗಳಿಗೂ ಭಾವ ಮತ್ತು ರೂಪದಲ್ಲಿ ಇರುವ ಸಾಮ್ಯವು ವಿಶೇಷವಾಗಿ ದಾಸರ ಉಗಾಭೋಗಗಳಲ್ಲಿ ಶಬ್ದಶಃ ಕಂಡು-ಬರುತ್ತದೆ. ಉದಾಹರಣೆಗೆ ಪುರಂದರದಾಸರ ಈ ಉಗಾಭೋಗಗಳನ್ನು ನೋಡಬೇಕು—

"ಜಗವ ಸುತ್ತಿಹುದೆಲ್ಲ ನಿನ್ನ ಮಾಯೆಯಯ್ಯ ।
ನಿನ್ನ ಸುತ್ತಿಹುದೆಲ್ಲಯೆನ್ನ ಮನವಯ್ಯ ॥
ಕರಿಯು ಕನ್ನಡಿಯಲ್ಲಿ ಅಡಗಿಪ್ಪ ತೆರದಂತೆ ।
ಯೆನ್ನೊಳು ಅಡಗಿದಿಯೊ ಪುರಂದರವಿಠಲಾ ।"

ಮತ್ತು—

"ಯಾರು ಮುನಿದು ನಮಗೇನು ಮಾಡುವರಯ್ಯ ।
ಯಾರು ಒಲಿದು ನಮಗೇನು ಕೊಡುವರಯ್ಯ ।
ಕೊಡಬ್ಯಾಡ ನಮ್ಮ ಕುನ್ನಿಗೆ ಕಾಸನು ।
ಅನೆಮ್ಯಾಲೆ ಪೋಪಗೆ ಶ್ವಾನ ಮುಟ್ಟಬಲ್ಲುದೆ ನಮಗೆ
ಶ್ರೀ ಪುರಂದರವಿಠಲಾನೆ ಸಾಕು ॥"

ಶ್ರೀ ಪುರಂದರರ ವ್ಯಕ್ತಿತ್ವವು ಬಹುಮುಖವಾದುದು. ಭಕ್ತ, ಅನುಭಾವಿ, ಕವಿ, ಗಾಯಕ, ಸಮಾಜಸುಧಾರಕ,

ವಿಶ್ವಪ್ರೇಮಿ– ಎಂದು ಹಲವು ಬಗೆಯಲ್ಲಿ ಅವರ ಬಹುಮುಖಿ-ವುಳ್ಳ ವ್ಯಕ್ತಿತ್ವವನ್ನು ಬಣ್ಣಿಸಬಹುದು. ಅವರು ಜೀವನದಲ್ಲಿ ಅತ್ಯಂತ ವಿನೀತರೂ ಆಗಿದ್ದರು. ತಮ್ಮನ್ನು ಹೊಗಳುವು-ದಕ್ಕಿಂತ ಜನರು ತಮ್ಮನ್ನು ನಿಂದಿಸಿ ತಮ್ಮ ಲೋಪ–ದೋಷ-ಗಳನ್ನು ಎತ್ತಿ ತೋರಿಸಬೇಕೆಂದು ಹೇಳಿದ್ದಾರೆ. ಒಂದು ಹಾಡಿನಲ್ಲಿ ಅವರು—

‘‘ಬೈಯಿರೋ ಬೈಯಿರೋ ।
ಮನಮುಟ್ಟ ಬೈಯಿರೋ ॥
ಚೆನ್ನಾಗಿ ಬೈದೆನ್ನ ಧನ್ಯನ ಮಾಡಿರೋ ।
ಅವರು ಇವರು ಬೈದರೆಂಬೋ ಹೀನ ಬುದ್ಧಿ ನನಗಿಲ್ಲ ॥”

ಎಂದಿದ್ದಾರೆ.

ಶ್ರೀ ಪುರಂದರದಾಸರು ಹುಟ್ಟು ನಗೆಗಾರರೂ ಆಗಿದ್ದರು; ಅವರ ಅನೇಕ ಕೀರ್ತನೆಗಳಲ್ಲಿ ಅವರ ಹಾಸ್ಯದ ಮನೋವೃತ್ತಿ ಕಂಡುಬರುತ್ತದೆ. ಅವರದು ನಕ್ಕುನಗಿಸುವ ನಗೆ. ಸಮಾಜದ ಡಾಂಭಿಕ ಆಚಾರವನ್ನು ಕಂಡು ಅವರು ‘‘ನಗೆಯು ಬರುತಿದೆ” ಎಂದು ಹಾಡಿದರು. “ನಾಯಿ ಬಂದದಪ್ಪಾ ಅಣ್ಣಾ ಅತ್ತಲಾಗಿರಿ” ಎಂಬ ಅವರ ಹಾಡಿನಲ್ಲಿ ವಿನೋದದೃಷ್ಟಿಯ ಜೊತೆಗೆ ವಿಧಾಯಕ ಉಪದೇಶವೂ ಇದೆ. ಈ ನಾಯಿ ಯಾವುದು ? —

“ ಮಾನವ ಜನ್ಮದ ಹೀನ ನಾಯಿ ! ”

“ನಾಯಿ ಬಂದದಪ್ಪಾ ಅಣ್ಣಾ ಅತ್ತಲಾಗಿರಿ ॥ ಪಲ್ಲ ॥
ನಾಯಿ ಅಂದರೆ ನಾಯಿ ಅಲ್ಲ, ಮಾನವ ಜನ್ಮದ
ಹೀನ ನಾಯಿ ॥ ಅನುಪಲ್ಲ ॥

ಕೊಟ್ಟ ಸಾಲವ ಕೊಡದ ನಾಯಿ ।
ಇಟ್ಟ ಭಾಷೆಯ ತಪ್ಪುವ ನಾಯಿ ।
ಕಟ್ಟೆ ಮೇಲೆ ಕುಳಿತುಕೊಂಡು ।
ಅಟ್ಟ ಹಾಸದಿ ಬಗುಳುವ ನಾಯಿ ॥ ... ... "

ಮತ್ತೊಂದು ಕೀರ್ತನೆಯಲ್ಲಿ ಪುರಂದರರು "ಕುರುಡು ನಾಯಿ ತಾ ಸಂತೆಗೆ ಬಂತಂತೆ । ಅದು ಏತಕೆ ಬಂತೋ ।। ಹೆಂಡಿರಮಕ್ಕಳ ನೆಚ್ಚಿತಂತೆ । ಕೊಂಡುಹೋಗುವಾಗ ಯಾರಿಲ್ಲವಂತೆ " ಎಂದು ಈ ಮಾನವ ನಾಯಿಯನ್ನು ಬಣ್ಣಿಸಿ ಕೊನೆಗೆ "ನಾನಾ ಜನ್ಮ ವೆತ್ತಿತಂತೆ । ತಾನು ತನ್ನನೆ ಮರೆಯಿತಂತೆ ॥ ರಂಗ ಪುರಂದರ ವಿಠಲನ ಮರೆದು । ಬಹಳ ಭಂಗ ಪಟ್ಟಿತಂತೆ " ಎಂದೂ ಈ " ಕುರುಡು ನಾಯಿಯ " ಸ್ಥಿತಿಯನ್ನು ನಿರೂಪಿಸಿದ್ದಾರೆ. ಇಂಥ ವಿನೋದಾತ್ಮಕ ಪ್ರಾಣಿರೂಪಕಗಳ ಸೊಗಸು ಜನ ಸಾಮಾನ್ಯರಿಗೆ ರುಚಿಸುವದರಲ್ಲಿ ಆಶ್ಚರ್ಯವೇನು ?

ಹಣದ ಮಹಿಮೆಯನ್ನು ಹೇಳಿ ಅದರ ನಿಸ್ಸಾರತೆಯನ್ನೂ, ದುಷ್ಪರಿಣಾಮವನ್ನೂ ಪರಿಣಾಮಕಾರಿಯಾಗಿ ನಿರೂಪಿಸುವ ಒಂದೆರಡು ಪುರಂದರರ ಹಾಡುಗಳು ಸೊಗಸಾಗಿವೆ. ಒಂದೆಡೆಗೆ ಅವರು —

ರೊಕ್ಕ ಎರಡಕ್ಕು ದುಃಖ ಕಾಣಕ್ಕ ॥ ಪಲ್ಲ ॥
ಮಕ್ಕಳ ಮರಿಗಳ ಮಾಡೋದು ರೊಕ್ಕ ।
ಸಕ್ಕರೆ ತುಪ್ಪವ ಸವಿಸೋದು ರೊಕ್ಕ ॥
ಚಕ್ಕುಲಾತಿಯನು ಬಿಡಿಸೋದು ರೊಕ್ಕ ।
ಘಕ್ಕನೆ ಹೋದರೆ ಘಾತ ಕಾಣಕ್ಕ ॥

ಎಂದು ಹಾಡಿದ್ದಾರೆ. " ಬೆಲ್ಲಕಿಂತಲು ಬಹುಸವಿಯಾದ

ರೊಕ್ಕ । ಇಲ್ಲದಿರಲು ಬಹುದುಃಖ ಕಾಣಕ್ಕ ” ಎಂದು ಬಣ್ಣಿಸಿ ಕೊನೆಗೆ — “ ಮುದ್ದು ಪುರಂದರವಿಠಲನ ಮರೆಸುವ । ಬಿದ್ದ್ಹೋಗೋ ರೊಕ್ಕವ ಸುಡು ನೀನಕ್ಕ ” ಎಂದೂ ಉಪ ದೇಶಿಸಿದ್ದಾರೆ.

ಶ್ರೀ ಪುರಂದರರು ಅನೇಕ ಕಡೆಗೆ ಸಂಚಾರ ಮಾಡುವಾಗ ಮಧ್ಯಮ ವರ್ಗದ ಸಾಮಾಜಿಕ ಜೀವನದ ದುಃಖ-ಸುಖ ಗಳನ್ನೂ ಕಣ್ಣಿಟ್ಟು ನೋಡಿದ್ದರು. ಅವರ ಹಾಸ್ಯದ ದೃಷ್ಟಿ ಸದಾ ಜಾಗೃತವಾಗಿರಬೇಕು; ಪರಮಾರ್ಥದ ಹಿರಿಮೆ, ಆವಶ್ಯ ಕತೆಗಳನ್ನು ಜನತೆಯಮೇಲೆ ಬಿಂಬಿಸುವಾಗ ಕೂಡ ಅವರು ನಿತ್ಯ ಜೀವನದ ವೈಚಿತ್ರ್ಯಗಳನ್ನು ಕಾಣದೆ ಇರಲಿಲ್ಲ. ಉದಾಹರಣೆಗೆ “ ಇಬ್ಬರ್ಹೆಂಡಿರ ಸುಖ ” ವನ್ನು ಮಾರ್ಮಿಕವಾಗಿ ಬಣ್ಣಿಸುವ ಈ ಹಾಡನ್ನು ನೋಡಬಹುದು—

ಇಬ್ಬರ್ಹೆಂಡಿರ ಸುಖವ ಇಂದು ಕಂಡೆನಯ್ಯ ।
ಅಬ್ಬಬ್ಬ ! ಎಂದಿಗು ಸಾಕು ಸಾಕಯ್ಯ ॥
ಒಬ್ಬಳಲಿ ಪೋಗಿ ಓಗರವ ಮಾಡೆನ್ನಲು ।
ಜೊಬ್ಬೆಯೇನಿದು ಕೊಬ್ಬೆ ನಡೆಯೆಂಬಳು ॥
ತಬ್ಬಿಬ್ಬುಗೊಂಡು ಇನ್ನೊಬ್ಬಳನು ಮಾಡೆಸಲು ।
ಅಬ್ಬ ಬಿಸಿ ಮುಟ್ಟಲಾಪೆನೆ ಎಂಬಳು ॥ ೧ ॥

ಕೊನೆಗೆ “ಅವಳಿಂದ ಸುಖವಿಲ್ಲ ಇವಳಿಂದ ಫಲವಿಲ್ಲ । ಇವರಿಬ್ಬರ ಸಂಗ ಅಭಿಮಾನ ಭಂಗ” ಎಂದು ಅವರು ಹಾಡಿ ದ್ದಾರೆ. ಹಾಗೆಯೇ ಪ್ರಾಪ್ತವಯಸ್ಕಳಾದ ಕನ್ಯೆಯೋರ್ವಳು “ವೈದಿಕ ಗಂಡನನ್ನು ಮದುವೆಯಾಗಲು ಒಲ್ಲೆ” ಎಂದು

ಹೇಳುವ ಹಾಸ್ಯಮಯ ಕೀರ್ತನೆಯಲ್ಲಿ ವಿನೋದವಿದೆ, ಜೀವನ ದರ್ಶನವೂ ಇದೆ—

ಒಲ್ಲೆನೆ ವೈದಿಕ ಗಂಡನ ನಾ ।
ನೆಲ್ಲಾದರು ನೀರು ಧುಮುಕುವೆ ॥ ಪಲ್ಲ ॥
ಉಟ್ಟೇನೆಂದರೆ ಇಲ್ಲ ತೊಟ್ಟೇನೆಂದರೆ ಇಲ್ಲ ।
ಕೆಟ್ಟ ಸೀರೆಯ ನಾನುಡಲಾರೆನೆ ॥
ಹಿಟ್ಟು ತೊಳಿಸಿ ಎನ್ನ ರಟ್ಟೆಲ್ಲ ನೊಂದವು ।
ಎಷ್ಟೆಂತ ಹೇಳಲಿ ಕಷ್ಟದ ಒಗೆತನ ॥ ......

ಹಾಗೆಯೇ ಇನ್ನೊಂದು ಹಾಡಿನಲ್ಲಿ "ಮುಪ್ಪಿನ ಗಂಡನ ಒಲ್ಲೆನು ನಾನು । ತಪ್ಪದೆ ಪಡಿಪಾಟ ಪಡಲಾರೆನಕ್ಕ" ಎಂದು ಗೋಳಿಡುವ ಕನ್ಯೆಯೋರ್ವಳ ಶೋಚನೀಯ ಸ್ಥಿತಿಯನ್ನು ವಿನೋದಾತ್ಮಕವಾಗಿ ನಿರೂಪಿಸಿದ್ದಾರೆ.

ಸಂಸ್ಕೃತದಲ್ಲಿ "ಕೌಪೀನವಂತಃ ಖಲು ಭಾಗ್ಯವಂತಃ" ಎಂದು ಹೇಳುವದುಂಟು. ಶ್ರೀ ಪುರಂದರರು ಅದಕ್ಕೂ ಒಂದು ಹೆಜ್ಜೆ ಮುಂದೆ ಹೋಗಿ— "ಲಂಗೋಟಿ ಬಲುಪ್ರೌಳ್ಳಿದಣ್ಣ" ಎಂದು ಹಾಡಿದ್ದಾರೆ. ಇದರಲ್ಲಿ ವೈರಾಗ್ಯದ ಮಹಿಮೆಯ ಜೊತೆಗೆ ಹಾಸ್ಯ ದೃಷ್ಟಿಯೂ ಬೆರತಿದೆ. ಅವರು ಹಾಡಿದಂತೆ—

ಲಂಗೋಟಿ ಬಲುಪ್ರೌಳ್ಳಿದಣ್ಣ । ಒಬ್ಬ —।
ಹಂಗಿಲ್ಲದೆ ಮುಡಿಗೆ ಒದಗುವದಣ್ಣ ॥
ಬಡವರಿಗಾಧಾರವಣ್ಣ । ಈ ಲಂಗೋಟಿ ।
ಬೈರಾಗಿಗಳ ಭಾಗ್ಯವಣ್ಣ ॥
ಮುಡಿವಾಳರಿಗೆ ಶತ್ರು ಮಠಯ್ಯಗಳ ಮಿತ್ರ ।
ಪ್ರೌಢವಿಯೊಳ್ ಯಾಚಕರಿಗೆ ನೆರವು ॥ ......

ಇನ್ನೊಂದೆಡೆಗೆ ಪುರಂದರರು – "ಪರಮಾತ್ಮನೇ ಸಾಲ ಮಾಡಿ ತಪ್ಪಿಸಿಕೊಳ್ಳಲು ದಶಾವತಾರ ಮಾಡಿದ್ದಾನೆ" ಎಂದು ವಿನೋದಮಯವಾಗಿ ಬಣ್ಣಿಸಿದ್ದಾರೆ. ಸಾಲ ಮಾಡಿದವನು ಸಾಲಿಗನಿಂದ ತಪ್ಪಿಸಿಕೊಳ್ಳಲು ನೂರಾರು ಉಪಾಯ ಹೂಡು ವಂತೆ, ಪರಮಾತ್ಮನು ಒಂದೊಂದು ಅವತಾರದಲ್ಲಿ ಒಂದೊಂದು ಹೊಸ ಉಪಾಯ ಹೂಡಿದ್ದಾನೆ !—

ಸಾಲಿಗರಿನ್ನು ಬಿಡುವರೆ ಬಲು ಜಾಲಗಳನು ಮಾಡಿ ಕಾಲ
ನೂಕಿ ಕಳೆದರೆ ॥
ಜಲದೊಳು ಪೊಕ್ಕಡಗಿರಲು ಬಲು ಗಿರಿಯನೆ ಪೊತ್ತು
ಭಾರವೆಂದೆನಲು ॥

ಸಾಲಿಗರಿಂದ ತಪ್ಪಿಸಿಕೊಳ್ಳಲು ಪರಮಾತ್ಮನು ಮತ್ಸ್ಯ, ಕೂರ್ಮ ವರಾಹಾದಿ ಅವತಾರಗಳನ್ನು ಎತ್ತಿದ್ದಾಯಿತು. ಕೊನೆಗೆ ಬೌದ್ಧಾವತಾರ, ಕಲ್ಕಿ ಅವತಾರಗಳನ್ನು ಎತ್ತಬೇಕಾಯಿತು !—

ಉಟ್ಟಿದ್ದು ಬಿಟ್ಟು ನಿಂದಿರಲು । ಬಲು ।
ಕೆಟ್ಟೆನೆಂದು ಕುದುರೆಯ ಪಿಡಿದಿರಿಲು ॥ —

ಹೀಗೆ ಪರಮಾತ್ಮನ ಅವತಾರದ ಘನಕಾರ್ಯಕ್ಕೆ ದಾಸರು ಕೊಡುವ ಸಾಲದ ಕಾರಣವು ನಿಜವಾಗಿಯೂ ಹಾಸ್ಯಮಯ ವಾಗಿದೆ.!

ಶ್ರೀ ಪುರಂದರರು ಕೇವಲ ಯಾವುದೇ ಒಂದು ಮತದ ಕಟ್ಟಿಗೆ ಮಾತ್ರ ಒಳಪಟ್ಟವರಾಗಿರದೆ ವಿಶಾಲವಾದ, ವಿಶ್ವವ್ಯಾಪಿ-

ಯಾದ ಮಾನವ ಧರ್ಮದ ದರ್ಶನವನ್ನು ಪಡೆದವರಾಗಿದ್ದರು. ಧರ್ಮವು ಅಸ್ತಿತ್ವದಲ್ಲಿರುವುದು ಮಾನವನನ್ನು ಉದ್ಧರಿಸು-ವುದಕ್ಕಾಗಿ. ಇಂಥ ಧರ್ಮಕ್ಕೆ ಎಂದೂ ಸೋಲು ಇಲ್ಲ. ಅವರ ಒಂದು ಚಿರಸ್ಮರಣೀಯವಾದ ಕೀರ್ತನೆಯಲ್ಲಿ ಅವರು ಹೀಗೆ ಹಾಡಿದ್ದಾರೆ—

ಧರ್ಮವೇ ಜಯವೆಂಬ ದಿವ್ಯ ಮಂತ್ರ।
ಮರ್ಮವನ್ನರಿತು ಮಾಡಲುಬೇಕು ತಂತ್ರ॥
ವಿಷವಿಕ್ಕಿದವಗೆ ಷಡ್ರಸವನುಣಿಸಲುಬೇಕು।
ದ್ವೇಷಮಾಡಿದವನ ಪೋಷಿಸಲುಬೇಕು॥
ಪುಸಿಯಾಡಿ ಕೆಡಿಸುವನ ಹಾದಿ ಹರಸಲುಬೇಕು।
ಮೋಸ ಮಾಡುವನ್ಹೆಸರು ಮಗನಿಗಿಡಬೇಕು।
ಕೊಂದ ವೈರಿಯ ಮನೆಗೆ ನಡೆದು ಹೋಗಲುಬೇಕು।
ಕುಂದೆಣಿಸುವವರ ಗೆಳೆತನ ಮಾಡಬೇಕು॥"

ಈ ಕೀರ್ತನೆಯಲ್ಲಿ ದ್ವೇಷಕ್ಕೆ ಪ್ರತಿಯಾಗಿ ಪ್ರೀತಿಯನ್ನು ತೋರಬೇಕೆಂದೂ, ವೈರಿಯ ಮನಃಪರಿವರ್ತನೆ ಮಾಡಲು ತನ್ನಲ್ಲಿ ಪರಿಶುದ್ಧಿಯನ್ನು ಉಂಟುಮಾಡಿಕೊಳ್ಳಬೇಕೆಂದೂ ಹೇಳಲಾಗಿದೆ. ಈ ಉದಾತ್ತ ತತ್ವವನ್ನು ಓದುವಾಗ ಮಹಾತ್ಮಾ ಗಾಂಧೀಜಿಯವರ ಸತ್ಯಾಗ್ರಹದ ಕಲ್ಪನೆ ಬರದೆ ಇರಲಾರದು. ನಿಜವಾದ ಸತ್ಯಾಗ್ರಹಿಯ ಮನೋ-ಧರ್ಮವು ಹೇಗಿರಬೇಕೆಂಬ ಮಾತು ಈ ಕೀರ್ತನೆಯಲ್ಲಿ ಮತ್ತು ಇನ್ನೂ ಹಲವು ಪುರಂದರರ ಕೀರ್ತನೆಗಳಲ್ಲಿಯೂ ವ್ಯಕ್ತವಾಗಿದೆ.

ಶ್ರೀ ಪುರಂದರರು ಮಹಾಭಾರತ, ರಾಮಾಯಣ, ಭಗವದ್ಗೀತೆ, ಭಾಗವತ ಪುರಾಣಗಳು ಇತ್ಯಾದಿ ಭಾರತೀಯ

ಉದಾತ್ತ ತಾತ್ವಿಕ ಗ್ರಂಥಗಳನ್ನು ಆಳವಾಗಿ ಅಭ್ಯಸಿಸಿ ಅರಿಸಿಕೊಂಡಿದ್ದರು, ಆದರೆ ಅವರ ಕೀರ್ತನೆಗಳಲ್ಲಿ ಅವುಗಳ ಸಾರವು ಮಾತ್ರ ಬಂದಿದೆ ಹೊರತಾಗಿ ಎಲ್ಲಿಯೂ ಅವರು ತಮ್ಮ ಪಾಂಡಿತ್ಯಪ್ರದರ್ಶನಕ್ಕೆ ಹೋಗಿಲ್ಲ. ಅವರು ಉಪಯೋಗಿಸಿದ ಭಾಷೆ ಜನಸಾಮಾನ್ಯರ ಆಡುನುಡಿ. ಎಷ್ಟೋ ಕಡೆಗೆ ವ್ಯಾಕರಣಕ್ಕೆ ಒಪ್ಪಿಗೆಯಾಗದ ಪ್ರಯೋಗಗಳು ಬಂದರೂ ದಾಸರು ಅವುಗಳಿಗೆ ಮಹತ್ವಕೊಟ್ಟಿಲ್ಲ. ಉದಾಹರಣೆಗೆ—"ಯಾರೂ ಬಾಹೋರಿಲ್ಲ", "ದಾರು ಬಂದವರು" ಇತ್ಯಾದಿ. ಕನ್ನಡ ದೇಸಿಯಲ್ಲಿ ಎಂಥ ಸೌಂದರ್ಯ ಮತ್ತು ಶಕ್ತಿಗಳಿವೆ ಎಂಬುದು ದಾಸರ ಭಾಷೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ತಿಳಿದುಬರುತ್ತದೆ. "ಪುರಂದರದಾಸರು ಹೇರಳವಾದ ಭಕ್ತಿಗೀತೆಗಳನ್ನು ರಚಿಸಿ, ಜನಸಾಮಾನ್ಯಕ್ಕೂ ಕನ್ನಡ ಸಾಹಿತ್ಯಕ್ಕೂ ಚಿರವಾದ ಬೆಸುಗೆಯನ್ನುಂಟುಮಾಡಿದ ಹಿರಿಯ ವ್ಯಕ್ತಿಗಳಲ್ಲಿ ಒಬ್ಬರು" ಎಂದು ಡಾ॥ ರಂ. ಶ್ರೀ ಮುಗಳಿಯವರು ತಮ್ಮ "ಕನ್ನಡ ಸಾಹಿತ್ಯ ಚರಿತ್ರೆ" ಯಲ್ಲಿ ಹೇಳಿದ್ದಾರೆ. ಕೀರ್ತನ ಪದ್ಧತಿಯ ಉದ್ಧಾರ, ಮತವೈರಗಳ ಪರಿಹಾರ, ಪಂಚಮರಲ್ಲಿ ಸಹಾನುಭೂತಿ ಪ್ರದರ್ಶನ, ಕರ್ನಾಟಕ ಭಾಷೋಜ್ಜೀವನ, ಸಂಗೀತ ಶಾಸ್ತ್ರದ ಉದ್ಧಾರ ಇವುಗಳನ್ನು ಪುರಂದರದಾಸರು ಮಾಡಿದರೆಂದು ಶ್ರೀ ಬೇಲೂರು ಕೇಶವದಾಸರು ನುಡಿದಿದ್ದಾರೆ.

ಭಾರತೀಯ ಸಂಸ್ಕೃತಿಯ ಉದಾತ್ತ ಗುಣಗಳೆಲ್ಲ ಶ್ರೀ ಪುರಂದರದಾಸರ ವ್ಯಕ್ತಿತ್ವದಲ್ಲಿ ಕಂಡುಬರುತ್ತವೆ. ಭಕ್ತಿ,

ಧರ್ಮ, ಕಾವ್ಯ, ಸಂಗೀತ, ಸಹಾನುಭೂತಿ, ಜೀವನದರ್ಶನ ಮೊದಲಾದ ಸಂಸ್ಕೃತಿಯ ವಿವಿಧ ಅಂಗಗಳ ಬೆಳವಣಿಗೆಗೆ ಶ್ರೀ ಪುರಂದರದಾಸರು ಕಾರಣರಾಗಿದ್ದಾರೆ. ಅವರು ಕನ್ನಡ ಭಾಷೆ, ದೇಶ, ಜನ ಮತ್ತು ಸಂಸ್ಕೃತಿಗಳಿಗೆ ನೀಡಿದ ಕಾಣಿಕೆ ಹಿರಿದಾಗಿದೆ. ತಮ್ಮ ಗುರುಗಳಾದ ಶ್ರೀ ವ್ಯಾಸತೀರ್ಥರಿಂದ ‚‚ನೀತಿಯೆಲ್ಲವನರಿತು ನಿಗಮವೇದ್ಯನ ನಿತ್ಯ ಮಾತುಮಾತಿಗೆ ಬಿಡದೆ ವರ್ಣಿಸುತಲಿ, ಗೀತನರ್ತನದಿ ಶ್ರೀ ಕೃಷ್ಣನ್ನ ಪೂಜಿಸುವ ಪೂತಾತ್ಮದಾಸ ಪುರಂದರದಾಸರಯ್ಯ" ಎಂಬ ಪ್ರಶಂಸೆಯನ್ನು ಪಡೆದ ಶ್ರೀ ಪುರಂದರದಾಸರು ನಿಜವಾಗಿಯೂ ಧನ್ಯರು.

೨೮. ಗಿಲಿಹಿಲಿರ ಕ್ರಾಂತಿ ( ,, ) –ಸಿ. ವೀರಬಸಣ್ಣ
೨೯. ಕನ್ನಡ ಕಥಾಸೃಷ್ಟಿ (ದ್ವಿ. ಆ.) –ಬಿ. ಬಿ. ಮಹೀಶವಾಡಿ
೩೦. ಸಂಸ್ಕೃತ ಸಾಹಿತ್ಯದಲ್ಲಿ ಶೃಂಗಾರರಸ (ದ್ವಿ. ಆ.)
–ಕೆ. ಕೃಷ್ಣಮೂರ್ತಿ
೩೧. ನೀರಾವರಿ ಬೇಸಾಯ –ಎಸ್. ಎ. ಹೊಸಮನಿ
೩೨. ಸಾರ್ವಜನಿಕ ಅಭಿಪ್ರಾಯ –ಎನ್. ರಾಜಗೋಪಾಲರಾವ್
೩೩. ಕನ್ನಡ ಕಾವ್ಯಗಳಲ್ಲಿ ಕಿರಾತಾರ್ಜುನ ಪ್ರಸಂಗ
–ದೇವೇಂದ್ರಕುಮಾರ ಹಕಾರಿ
೩೪. ಕನ್ನಡಕ್ಕೆ ಪುರಂದರದಾಸರು ನೀಡಿದ ಕೊಡುಗೆ
–ಜಿ. ಡಿ. ನಾಡಕರ್ಣಿ
೩೫. ಫ್ಯಾಶನ್ನುಗಳು (ದ್ವಿ. ಆ.) –ಕೆ. ಡಿ. ತಂಗೋಡ
೩೬. ಮಹಾಕವಿ ರಾಘವಾಂಕನ ಪಾತ್ರಗಳಲ್ಲಿ ತತ್ವನಿಷ್ಠೆ (ದ್ವಿ. ಆ.)
- ಬಿ. ವ್ಹಿ. ಮಲ್ಲಾಪುರ
೩೭. ಅಭಿವೃದ್ಧಿ ಯೋಜನೆಗಳಲ್ಲಿ ಸಹಕಾರದ ಪಾತ್ರ (ದ್ವಿ. ಆ.)
–ಎಸ್. ಜಿ. ಕರಭಂಟನಾಳ
೩೮. ಕನ್ನಡ ಜೈನ ಪುರಾಣಗಳು (ದ್ವಿ. ಆ.)–ಎಸ್. ಎನ್. ನಾಯಕ
೩೯. ಕನ್ನಡ ನಾಟ್ಯಸೃಷ್ಟಿ –ಎಚ್. ಜಿ. ಲೋಕೂರ
೪೦. ಹರಿಹರನು ಚಿತ್ರಿಸಿದ ಶಿವಶರಣೆಯರು (ದ್ವಿ. ಆ.)–ಬಿ. ಬಿ. ಹೆಂಡಿ
೪೧. ನೀವು ಬಯಸುವ ಮಗು ಗಂಡೊ ? ಹೆಣ್ಣೊ ? (ದ್ವಿ. ಆ.)
–ಕೆ. ಆರ್. ರಾಮಸ್ವಾಮಿ
೪೨. ಆಂಡಯ್ಯ –ಬಿ. ಎಸ್. ಕುಲಕರ್ಣಿ
೪೩. ಬೆಳವಲನಾಡಿನ ಬೆಳೆಗಳು –ಎಸ್. ಎ. ಹೊಸಮನಿ
೪೪. ಜಾನಪದ ಕಥೆಗಳು (ದ್ವಿ. ಆ.) –ಎಲ್. ಆರ್. ಹೆಗಡೆ
೪೫. ಸುಧಾರಿಸಿದ ಬೇಸಾಯ –ಎ. ಸಿ. ಕಲ್ಯಾಣಿಮಠ
೪೬. ಕನ್ನಡನಾಡಿನ ಐತಿಹಾಸಿಕ ಮಹಾಪುರುಷರು
–ಬಿ. ಆರ್. ಗೋಪಾಲ
೪೭. ಗ್ರಂಥಾಲಯದ ಅಂತರಂಗ –ಎಸ್. ಆರ್. ಗುಂಜಾಳ
೪೮. ಸ್ತ್ರೀ ಮತ್ತು ಶಿಕ್ಷಣ –ವನಮಾಲಾ ಆಚಾರ್
೪೯. ಜಾಗತಿಕ ಸರಕಾರ –ಸಿ. ವೀರಬಸಣ್ಣ
೫೦. ಸಮುದಾಯ ಸಂಘಟನೆ –ಎಚ್. ಎಂ. ಮರುಳಸಿದ್ಧಯ್ಯ
೫೧. ಅಶೋಕನ ಧರ್ಮಶಾಸನಗಳು –ಶ್ರೀನಿವಾಸ ರಿತ್ತಿ
೫೨. ಪ್ರಾಚೀನ ಭಾರತದ ರಾಜ್ಯಪದ್ಧತಿ (ದ್ವಿ. ಆ.)
–ಸಿ. ವ್ಹಿ. ರಂಗಸ್ವಾಮಿ
೫೩. ಅಕ್ಕಮಹಾದೇವಿ ಮತ್ತು ಮೀರಾಬಾಯಿ
–ಎಸ್. ಎಸ್. ಕಬ್ಬಿನ

೫೪. ಕನ್ನಡ ಕಾವ್ಯದಲ್ಲಿ ವೀರರಸ ನಿರೂಪಣೆ —ಬಿ. ಬಿ. ಮಹೀಶವಾಡಿ

೫೫. ಹರಿಹರ ಮಹಾಕವಿಯ ಕೆಲವು ಮಹೋನ್ನತ ವಿಚಾರಗಳು —ಬಿ. ಸಿ. ಜವಳಿ

೫೬. ಭಾರತ ರಾಜ್ಯಘಟನೆ —ಎಂ. ಎಸ್. ಪಾಟೀಲ

೫೭. ಪಂಚಾಯತಿ ರಾಜ್ಯ —ಎಸ್. ಜಿ. ಕರಭಂಟನಾಳ ಮತ್ತು ಕೆ. ಡಿ. ಬಸವ

೫೮. ವಿಷಮಜ್ವರ —ಪಿ. ಎಸ್. ಶಂಕರ

೫೯. ಪುಸ್ತಕ ಭಾಂಡಾರ ಕಾಯದೆ —ಜಿ. ಎಂ. ಪಾಟೀಲ

೬೦. ಸರ್ ಐಸಾಕ್ ನ್ಯೂಟನ್ —ಆರ್. ವ್ಹಿ. ಅಬ್ಬಿಗೇರಿ

೬೧. ಗ್ರಾಮಾಭ್ಯುದಯದ ಯೋಜನಾಂಗಗಳು —ಟಿ. ಕೆ. ಮೇಟಿ

೬೨. ಹರಿಜನರ ಸಮಸ್ಯೆಗಳು ಹಾಗು ಅವುಗಳ ಪರಿಹಾರ —ಎನ್. ಕೆ. ಕಡೆತೋಟದ

೬೩. ರಾಸಾಯನಿಕ ಕಿಣ್ವಗಳು —ಎಂ. ಎಸ್. ಎಸ್. ರಾವ್

೬೪. ಪ್ರಜಾಪ್ರಭುತ್ವದ ಮೂಲತತ್ವಗಳು —ಕೆ. ಬಿ. ಬಕ್ಕಪ್ಪ

೬೫. ಹೃದಯಾಘಾತ — ಪಿ. ಎಸ್. ಶಂಕರ್

೬೬. ಆಭರಣಗಳ ಬಗೆಗೆ ಸಾಮಾಜಿಕ ದೃಷ್ಟಿಕೋನ —ಡಿ. ಎ. ಚಿಕ್ಕಿ

೬೭. ಶ್ರೀ ರಾಮಾಯಣ ದರ್ಶನದಲ್ಲಿ ಕುವೆಂಪು ಸೃಜಿಸಿದ ಮೂರು ಪಾತ್ರಗಳು —ಎಂ. ಜಿ. ಬಿರಾದಾರ

೬೮. ಯೋಜನೆಗಳೇಕೆ ಬೇಕು ? —ಎಸ್. ಎಸ್. ಯಮ್ಮಿ

೬೯. ಸಗರನಾಡಿನ ಶಿವಶರಣರು —ವ್ಹಿ. ಶಿವಾನಂದ

೭೦. ವಿಜ್ಞಾನದ ದೃಷ್ಟಿಯಲ್ಲಿ ಸೃಷ್ಟಿ —ಆರ್. ಎಸ್. ಭೂಸನೂರಮಠ

೭೧. ವಿಜಯನಗರದ ನಿರ್ಣಾಯಕ ಯುದ್ಧ —ಎಸ್. ಬಿ. ಕೋಡದ

೭೨. ಬಸವಣ್ಣನವರನ್ನು ಕುರಿತ ಶಾಸನಗಳು—ಎಂ. ಎಂ. ಕಲಬುರ್ಗಿ

೭೩. ಆಧುನಿಕ ಭಾಷಾ ವಿಜ್ಞಾನ —ಜೆ. ಎಸ್. ಕುಳ್ಳಿ

೭೪. ಪುರಾಣ ಜಿಜ್ಞಾಸೆ — ಎಲ್. ಆರ್. ಹೆಗಡೆ

೭೫. ಭಾರತದಲ್ಲಿ ಶೈಕ್ಷಣಿಕ ಪ್ರಯೋಗ —ವ್ಹಿ. ಎಸ್. ಕುಲಕರ್ಣಿ

೭೬. ಅಧಿಕ ಉತ್ಪಾದನೆಗಾಗಿ ಮಿಶ್ರತಳಿ ಬೆಳೆಗಳು —ಎ. ಸಿ. ಕಲ್ಯಾಣಿಮಠ

೭೭. ಕನ್ನಡ ನುಡಿಯ ಬೆಳವಣಿಗೆ —ಎಚ್. ಜಿ. ಲೋಕೂರ

೭೮. ಹರಿಹರನ ಗಿರಿಜಾಕಲ್ಯಾಣ —ಬಿ. ವ್ಹಿ. ಶಿರೂರ

ಬೆಲೆ ಪ್ರತಿ ಒಂದಕ್ಕೆ ೨೫ ಪೈಸೆ